# ಈಶಾವಾಸ್ಯೋಪನಿಷತ್

ಮೂಲ, ಪ್ರತಿಪದಾರ್ಥ,
ತಾತ್ಪರ್ಯ, ವಿವರಣೆಗಳೊಡನೆ

ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು,
ಭಂಡಾರಕೇರಿ ಮಠ

ಶ್ರೀ ಮಧ್ವಸಿದ್ಧಾಂತ ಸಂವರ್ಧಕ ಸಭಾ,
ಉಡುಪಿ

# ಈಶಾವಾಸ್ಯೋಪನಿಷತ್

ಮೂಲ, ಪ್ರತಿಪದಾರ್ಥ
ತಾತ್ಪರ್ಯ, ವಿವರಣೆಗಳೊಡನೆ

ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು,
ಭಂಡಾರಕೇರಿ ಮಠ

ಶ್ರೀಮನ್ಮಾಧ್ವಸಿದ್ಧಾಂತ ಸಂವರ್ಧಕ ಸಭಾ,
ಉಡುಪಿ

ಪ್ರಕಾಶಕರು :
ಶ್ರೀ ಮಾಧ್ವರಾದ್ಧಾಂತ ಸಂವರ್ಧಕ ಸಭಾ,
ಉಡುಪಿ

ಮೊದಲನೇ ಆವೃತ್ತಿ

ಬೆಲೆ ರೂ. ೦.೫೦

ಮುದ್ರಕರು :
ಶಂ ಬಾ ಮನಗೋಳಿ,
ಆದರ್ಶ ಮುದ್ರಣ, ಕಿಲ್ಲೆ, ಹುಬ್ಬಳ್ಳಿ

# ಮುನ್ನುಡಿ

ಈಶಾವಾಸ್ಯೋಪನಿಷತ್ತು ಹತ್ತು ಮುಖ್ಯ ಉಪನಿಷತ್ತುಗಳಲ್ಲಿ ಅತಿ ಮುಖ್ಯವಾದ ಒಂದು ಉಪನಿಷತ್ತು. ಅದು ಗಾತ್ರದಲ್ಲಿ ಕಿರಿದಾದರೂ ಪ್ರತಿಭೆ ಯಲ್ಲಿ ಹಿರಿದು. ಅದರಲ್ಲಿ ಹೇಳಿದ ತತ್ತ್ವರಹಸ್ಯದ ಜ್ಞಾನವು ಅದರ ಋಷಿ ಯಾದ ಸ್ವಾಯಂಭುವ ಮನುವಿನ ಮನಸ್ಸಿನಲ್ಲಿದ್ದಂತೆ ಯಥಾರ್ಥವಾದ ರೀತಿ ಯಲ್ಲಿ ಆದರೆ ಮಾನವಕುಲದ ಉನ್ನತಿಗೆ ಅದರಿಂದಾಗುವ ಉಪಕಾರವು ಬೇರಿ ನ್ನಾವುದರಿಂದಲೂ ಆಗದು. ಈ ಅಭಿಪ್ರಾಯವನ್ನೆ ಮನಸ್ಸಿನಲ್ಲಿಟ್ಟುಕೊಂಡು ಈ ಉಪನಿಷತ್ತನ್ನು ಓದಿ ಅಭ್ಯಾಸ ಮಾಡಲಿಕ್ಕೆ ಪ್ರೇರಕವಾಗುವ ಮುಖ್ಯಾಂಶಗಳು ಯಾವುವೆಂಬುದನ್ನು ವಿವರಿಸುವುದು ವಿಹಿತವೆಂದು ನಮಗೆನಿಸಿದೆ. ಯಾಕಂದರೆ ಶಾಸ್ತ್ರದಲ್ಲಿ ಪ್ರವೃತ್ತಿಯನ್ನುಂಟುಮಾಡುವ ಮುನ್ನ, ಅಧಿಕಾರಿಯು ಆ ಶಾಸ್ತ್ರದ ಪ್ರಾಮಾಣ್ಯವನ್ನು ತಿಳಿದುಕೊಳ್ಳಲಿಚ್ಛಿಸುವುದು ಸಹಜವೇ ಆಗಿದೆ. ಹಾಗೆಯೆ ಈ ಉಪನಿಷತ್ತಿನಲ್ಲಿ ಏನನ್ನು ಹೇಳಿದೆ ? ಅದನ್ನು ಏತಕ್ಕಾಗಿ ಓದಬೇಕು ? ಅದರಿಂದ ನಮಗೇನು ಉಪಯೋಗ ? ಮತ್ತು ಯಾರು ಇದನ್ನು ಓದಬೇಕು ? ಎಂಬಿವೇ ಮೊದಲಾದ ಪ್ರಶ್ನೆಗಳನ್ನು ಜಿಜ್ಞಾಸುಗಳು ಕೇಳುವುದು ಸ್ವಾಭಾವಿಕ. ಈ ಅಂಶಗಳನ್ನೇ ಶಾಸ್ತ್ರಕಾರರು ವಿಷಯ ಪ್ರಯೋಜನ ಅಧಿಕಾರಿ ಸಂಬಂಧ ಗಳೆಂಬೂ ಅನುಬಂಧ ಚತುಷ್ಟಯವೆಂದೂ ಹೆಸರಿಸಿರುವರು. ಆದುದರಿಂದ ಅವುಗಳನ್ನು ಒಂದೊಂದಾಗಿ ವಿವರಿಸುವುದು ಕ್ರಮಪ್ರಾಪ್ತವಾಗಿದೆ

ಭಾರತೀಯ ಸಂಸ್ಕೃತಿಯ ಅಂತಃಸತ್ತ್ವವನ್ನು ಅರಿತುಕೊಳ್ಳಲು ವೇದೋಪ-ನಿಷತ್ತುಗಳೇ ಮುಖ್ಯ ಸಾಧನಗಳಾಗಿವೆ. ಅಷ್ಟೇಕೆ? ಅವುಗಳೇ ವಿಶ್ವಸಂಸ್ಕೃತಿಯ ಮೂಲಾಧಾರವೆಂದರೂ ತಪ್ಪಾಗದು. ಯಾಕಂದರೆ ಮನುಸ್ಮೃತಿಯಲ್ಲಿ, "ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನಃ | ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ " ಎಂದು ಭರತಖಂಡದ ಅಗ್ರಜನ್ಮನಿಂದ ಪೃಥಿವಿಯ ಸರ್ವ ಮಾನವರು ತಮ್ಮ ತಮ್ಮ ನಡತೆಯನ್ನು ತಿದ್ದಿಕೊಳ್ಳುತಿದ್ದರೆಂದು ಹೇಳಿದೆ. ಇಂತಹ ವೇದೋಪನಿಷತ್ತಿನ ಜ್ಞಾನದ ಮಹತ್ವವು ಎಷ್ಟೆಂಬುದನ್ನು ಬಿಡಿಸಿ ಹೇಳ ಬೇಕಾಗಿಲ್ಲ ಇಂದಿಗೂ ಆ ಉಪನಿಷದ್ರಹಸ್ಯದ ಜ್ಞಾನದಿಂದ ತಮ್ಮ ತಮ್ಮ ಜೀವ ನದ ರೀತಿನೀತಿಗಳನ್ನು ತಿದ್ದಿಕೊಂಡು ಉದ್ಧೃತರಾದ ಮಹಾಮಹಿಮರ ದೃಷ್ಟಾಂತ

ಗಳು ದೊರೆಯುತ್ತವೆ. ಆದುದರಿಂದ ಉಪನಿಷತ್ತುಗಳ ಅಧ್ಯಯನವು ಮಹೋಪ-ಕಾರಿಯೆಂಬ ಅದರ ಪ್ರಯೋಜನವನ್ನು ಒಡದು ಹೇಳುವ ಅವಶ್ಯಕತೆಯೇನಿದೆ?

ವೇದವು ಅನಾದಿ, ಪುರುಷಕೃತವಲ್ಲ ಸೃಷ್ಟಿಕಾಲದಲ್ಲಿ ತನ್ನ ಅನಾದಿಯಾದ ಬುದ್ಧಿಯಲ್ಲಿರತಕ್ಕ ವೇದವನ್ನು ಈಶ್ವರನು ತನ್ನ ಮಗನಾದ ಚತುರ್ಮುಖನಿಗೆ ಉಪದೇಶಿಸಿದನು. ಆ ಚತುರ್ಮುಖನಿಂದ ವೇದವು ಜಗತ್ತಿಗೆ ಸಿಕ್ಕಿತು. "ಯಾವತ್ ಬ್ರಹ್ಮವಿಷ್ಠಿತಂ ತಾವತೀ ವಾಕ್" ಎಂಬಿವೇ ಮೊದಲಾದ ವೇದ ವಾಕ್ಯಗಳಲ್ಲಿ ವೇದವು ಪರಬ್ರಹ್ಮನಷ್ಟೇ ಅನಾದಿಯಾಗಿದೆಯೆಂದು ಹೇಳಿದೆ. "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ" ಇತ್ಯಾದಿ ಮಂತ್ರಗಳಲ್ಲಿ ಪರಬ್ರಹ್ಮನು ತನ್ನ ಮಗನಾದ ಚತುರ್ಮುಖನಿಗೆ ಉಪದೇಶ ಮಾಡಿದನೆಂದಿದೆ ವೇದಗಳಿಗೆ ಶ್ರುತಿಯೆಂದು ಹೆಸರಿದೆ. ವೇದಗಳನ್ನು ಕೇಳಲಾಗಿದೆಯೇ ಹೊರತು ಮಾಡಲಾಗಿಲ್ಲೆಂಬುವೇ ಅದರ ಅಭಿಪ್ರಾಯ ಋಷಿಗಳು ಹಿಂದೆ ಇದ್ದ ವೇದವನ್ನು ತಮ್ಮ ತಪೋಬಲದಿಂದ ಕಂಡರು ಆದುದರಿಂದ ಅವರನ್ನು ದ್ರಷ್ಟಾರರೆಂದು ಕರೆಯಲಾಗುತ್ತಿದೆ. ಇಂತಹ ಮಂತ್ರಕ್ಕೆ ಇವನು ಋಷಿಯೆಂದು ಹೇಳುವುದಾದರೂ ಈ ಅರ್ಥವಲ್ಲಿಯೇ. ಒಂದೊಂದು ಮಂತ್ರಕ್ಕೆ ಅನೇಕ ಋಷಿಗಳಿರುವರು. ಇದರಿಂದಲೂ ಋಷಿಗಳು ಮಂತ್ರಕರ್ತರಲ್ಲೆಂದೂ ಮಂತ್ರದ್ರಷ್ಟಾರರೆಂದೂ ವ್ಯಕ್ತವಾಗುತ್ತದೆ. "ಅನಾದಿನಿಧನಾ ನಿತ್ಯಾ ವಾಕ್ ಉತ್ಸೃಷ್ಟಾ ಸ್ವಯಂಭುವಾ" ಅನಾದಿನಿತ್ಯವಾದ ವೇದವು ಪರಮಾತ್ಮನಿಂದ ಉಪದೇಶಿಸಲ್ಪಟ್ಟಿತೆಂದು ಮಹಾಭಾರತದಲ್ಲಿ ಹೇಳಿರುತ್ತದೆ ಈಶ್ವರನಿರ್ಮಿತರಾದ ಸೂರ್ಯ–ಚಂದ್ರರು ಲೋಕಹಿತಕಾರಿಗಳಿದ್ದಂತೆ ಈಶ್ವರನಿಂದ ಉಪದಿಷ್ಟವಾದ ವೇದಗಳೂ ಲೋಕಹಿತಕಾರಿಗಳಾಗಿವೆ ಸೂರ್ಯನಿಂದ ಗೂಗೆಯು ಉಪಕಾರವನ್ನು ಹೊಂದುವುದಿಲ್ಲ ಅದರಂತೆ ತಾಮಸಜೀವಿಗಳು ವೇದಗಳಿಂದ ಉಪಕಾರವನ್ನು ಪಡೆಯುವುದಿಲ್ಲ ಆದರೆ ಸೂರ್ಯನು ಲೋಕೋಪಕಾರಿಯೆಂಬ ಮಾತು ಸುಳ್ಳಾಗದು ಅಂತೆಯೇ ವೇದಗಳು ಮಹೋಪಕಾರಿಗಳೆಂಬ ಮಾತೂ ಸುಳ್ಳಾಗದು

"ವಸುಧೆಯ ಮೇಲೆ ಅಸುರಜನರೇ ಬಹಳ" ಎಂದು ಅಪರೋಕ್ಷಜ್ಞಾನಿಗಳಾದ ವಿಜಯದಾಸರು ಹೇಳಿದಂತೆ ಜಗತ್ತಿನಲ್ಲಿ ತಮೋಜೀವಿಗಳ ಸಂಖ್ಯೆಯೇ ಹೆಚ್ಚು ಆದುದರಿಂದ ವೇದದ ಉಪಯೋಗವನ್ನು ಬಹುಜನರು ಸರಿಯಾಗಿ ಮಾಡಿಕೊಳ್ಳುವುದಿಲ್ಲ ಬೆಲೆಯುಳ್ಳ ವಸ್ತುಗಳನ್ನು ಕೊಡಕೊಳ್ಳುವವರ

ಸಂಖ್ಯೆಯು ಯಾವಾಗಲೂ ಕಡಿಮೆಯೇ. ವಜ್ರ ವೈಡೂರ್ಯಾದಿಗಳ ವ್ಯಾಪಾರಕ್ಕೆ ಗಿರಾಕಿಗಳು ಹೆಚ್ಚಿರುವುದಿಲ್ಲ ಆದರೆ ಅವುಗಳನ್ನು ಕೊಳ್ಳುವವರು ಅಲ್ಪಸಂಖ್ಯಾಕರಾದ ಶ್ರೀಮಂತರೆಂಬುದು ಕಂಡ ಮಾತೇ. ಇದಕ್ಕೆ ವಿರುದ್ಧ ವಾಗಿ ಸಂತೆಪೇಟೆಯಲ್ಲಿ ಸಾವಿರಾರು ಜನರು ಸೇರುತ್ತಾರೆ. ಹಾಗೆಂದಮಾತ್ರಕ್ಕೆ ವಜ್ರವೈಡೂರ್ಯಾದಿಗಳ ಮಹತ್ವವು ಕಡಿಮೆಯೆಂದು ತಿಳಿದವರಾರೂ ಹೇಳ ಲಾರರು ಅದರಂತೆಯೇ ಕೆಲವೇ ಜನರು ವೇದಗಳಿಂದ ಬ್ರಹ್ಮಜ್ಞಾನವನ್ನು ಹೊಂದಲು ಪ್ರಯತ್ನಿಸುವರಾದರೂ ವೇದದ ಮಹತ್ವವು ಕಡಿಮೆಯಾಗದು.

ಪುರುಷನಿಂದ ಮಾಡಲ್ಪಟ್ಟ ಇತರ ಶಾಸ್ತ್ರಗಳಿಗೆ ಆದ್ಯಂತಗಳುಂಟು. ಆದರೆ ಅಪೌರುಷೇಯವಾದ ವೇದಗಳಿಗೆ ಆದಿಯೂ ಇಲ್ಲ; ಅಂತ್ಯವೂ ಇಲ್ಲ. " ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ಪರಂ " ಈಶ್ವರನ ಸಮಾ ನರು ಯಾರೂ ಇಲ್ಲ, ವೇದಶಾಸ್ತ್ರಕ್ಕೆ ಸಮಾನವಾದ ಶಾಸ್ತ್ರವಿಲ್ಲೆಂದು ಜ್ಞಾನಿಗಳು ನಿರ್ಣಯಿಸಿದ್ದಾರೆ ಇಂತಹ ವೇದದ ಒಂದು ಭಾಗವೇ ಈಶಾವಾಸ್ಯೋಪ- ನಿಷತ್ತು ಜಗತ್ಕಾರಣವಾದ ವಸ್ತು ಯಾವುದು ? ನಾವು ಎಲ್ಲಿಂದ ಹುಟ್ಟುತ್ತೇವೆ? ನಾವು ಜೀವಿಸುವುದೇತಕ್ಕೆ ? ನಮ್ಮ ಕೊನೆಯ ಗುರಿಯೇನು ? ಎಂದು ಸಾತ್ವಿಕ ಜೀವಿಗಳಲ್ಲಿ ಉತ್ಕಟವಾದ ಜಿಜ್ಞಾಸೆಯಿರುತ್ತದೆ. ಹಸಿದ ಮಗುವಿಗೆ ಪಥ್ಯವಾದ ಆಹಾರವನ್ನು ಕೊಟ್ಟು ಆತನನ್ನು ತಣಿಸುವ ತಾಯಿಯಂತೆ ವೇದ ಮಾತೆಯು ಸಾತ್ವಿಕ ಜೀವಿಗಳ ಈ ಜಿಜ್ಞಾಸೆಯನ್ನು ತಣಿಸುತ್ತಾಳೆ. ಸಣ್ಣ ದಾದ ಈಶೋಪನಿಷತ್ತು ಕೂಡ ಈ ಪ್ರಶ್ನೆಗೆ ಸಾರಭೂತವಾದ ಉತ್ತರವನ್ನು ಕೊಡುತ್ತದೆ. ಈ ಉಪನಿಷತ್ತಿನಲ್ಲಿ "ಕವಿರ್ಮನೀಷೀ" ಎಂಬ ಮಂತ್ರದಿಂದ ಜಗತ್‌ಸೃಷ್ಟಿಕರ್ತೃತ್ವ ಸರ್ವಜ್ಞತ್ವಾದಿ ಗುಣಗಳನ್ನೂ " ತದ್ಧಾವತೋಽನ್ಯಾನ್ ಅತ್ಯೇತಿ " ಎಂಬಿವೇ ಮೊದಲಾದ ವಾಕ್ಯಗಳಿಂದ ಆ ಈಶ್ವರನ ಸರ್ವತ್ರ ವ್ಯಾಪ್ತಿ ಮತ್ತು ಅಚಿಂತ್ಯಶಕ್ತಿಯನ್ನೂ ಹೇಳಿ ಅವನ ಯಥಾರ್ಥಜ್ಞಾನಿಗಳಿಗೆ ಸಮಸ್ತಶೋಕನಿವೃತ್ತಿಪೂರ್ವಕವಾದ ಶಾಶ್ವತ ಪೂರ್ಣಾನಂದಪ್ರಾಪ್ತಿರೂಪ ವಾದ ಮಹಾ ಪುರುಷಾರ್ಥವನ್ನು "ಸ ಪರ್ಯಗಾತ್ ಶುಕ್ರಂ" ಎಂಬ ಭಾಗದಲ್ಲಿ ಹೇಳಿರುತ್ತದೆ ಆರಂಭದ ಎರಡು ಮಂತ್ರಗಳಲ್ಲಿ ಯದೃಚ್ಛಾಲಾಭಸಂತುಷ್ಟನು ಮತ್ತು ಸ್ವವರ್ಣಾಶ್ರಮೋಚಿತ ಕರ್ಮಾನುಷ್ಠಾನದಲ್ಲಿ ನಿರತನಾದವನು ಈ ತತ್ತ್ವ ಜ್ಞಾನಕ್ಕೆ ಅಧಿಕಾರಿಯೆಂದು ಹೇಳಲಾಗಿದೆ.

"ಈಶಾವಾಸ್ಯಮಿದಂ ಸರ್ವಂ" ಎಂದು ಈ ಉಪನಿಷತ್ತಿನಲ್ಲಿ ಆರಂಭದಲ್ಲಿ ಹೇಳಿದ ಈಶನ ಸರ್ವವ್ಯಾಪಕತ್ವಜ್ಞಾನವು ಪರಮ ಪುರುಷಾರ್ಥಸಾಧನವಾದಂತೆ ಐಹಿಕದಲ್ಲಿ ಸಮಾಜದ ನೈತಿಕ ಅಧಃಪಾತವನ್ನು ತಪ್ಪಿಸಿ ಸಮಾಜದ ಉನ್ನತಿಗೆ ಮುಖ್ಯಸಾಧನವಾಗಿದೆ. ಲೋಕದಲ್ಲಿ ಭೃತ್ಯರು ತಮ್ಮ ಸನ್ನಿಧಾನದಲ್ಲಿ ಯಜಮಾನರು ಇಲ್ಲೆಂದು ತಿಳಿದು ಅನೇಕ ಅನ್ಯಾಯ ವಂಚನೆಗಳನ್ನು ಮಾಡುವುದುಂಟು. ಆದರಂತೆ "ಸ್ವಾಮಿಯಾದ ಪರಮಾತ್ಮನು ಒಳಗೂ ಹೊರಗೂ ಸರ್ವವ್ಯಾಪಿಯಾಗಿ ಸರ್ವಸಾಕ್ಷಿಯಾಗಿದ್ದಾನೆ. ಅವನೇ ನಮ್ಮ ಕರ್ಮಾನುಸಾರ ಸುಖದುಃಖಗಳನ್ನು ಕೊಡತಕ್ಕವನು" ಎಂಬ ಜ್ಞಾನವಿಲ್ಲದ ಕಾರಣ ಅನೇಕರು ಹೊರಗೆ ಸಮಾಜಕ್ಕೆ ತಾವು ಸಭ್ಯರಂತೆ ತೋರಿಸಿಕೊಂಡು ಆಂತರಿಕವಾಗಿ ಅನ್ಯಾಯ ವಂಚನೆಗಳನ್ನು ಬಹಳವಾಗಿ ಮಾಡುತ್ತಿರುವರು. ಇಂಥವರಿಗೆ ಈ ಉಪನಿಷತ್ತಿನ ತತ್ತ್ವಜ್ಞಾನವುಉಂಟಾದರೆ ಇಂತಹ ಘೋರ ಕೃತ್ಯಗಳು ನಿಂತು ಲೋಕಕ್ಷೇಮವಾಗಬಹುದು. ಮತ್ತು ಈ ಉಪನಿಷತ್ತಿನಲ್ಲಿ " ತೇನ ತ್ಯಕ್ತೇನ ಭುಂಜೀಥಾಃ" ಎಂದು ಯದೃಚ್ಛಾಲಬ್ಧಧನದಿಂದ ಸಂತುಷ್ಟನಾಗಿರಬೇಕೆಂದು ಉತ್ತಮ ಉಪದೇಶವಿದೆ. ಇದರಿಂದ ಐಹಿಕವಲ್ಲಿಯೂ ಸಮಾಜಕ್ಕೆ ಬಹಳ ಕಲ್ಯಾಣವಿದೆ ಎಷ್ಟೋ ಜನರು ಈಗ ದ್ರವ್ಯಸಂಪಾದನೆಯನ್ನು ಮಾಡುವ ಒಂದೇ ದೃಷ್ಟಿಯಿಂದ ನ್ಯಾಯಾನ್ಯಾಯಗಳನ್ನು ವಿಚಾರಿಸದೆ ಇತರರನ್ನು ವಂಚಿಸಿ ಧನವನ್ನು ಗಳಿಸಿ ಇಡುತ್ತಿದ್ದಾರೆ ಬಡಬಗ್ಗರಿಗೆ ಇದರಿಂದ ದೊಡ್ಡ ಆಘಾತವೇ ಆಗುತ್ತಿದೆ "ಯಾವತ್ ಭ್ರಿಯೇತ ಜಠರಂ ತಾವತ್ ಸ್ವತ್ವಂ ಹಿ ದೇಹಿನಾಂ। ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ" ಎಂಬುದಾಗಿ ಭಾಗವತದಲ್ಲಿ ತನ್ನ ಹೊಟ್ಟೆಗೆ ಬೇಕಾದುದಷ್ಟನ್ನೇ ತನ್ನದಾಗಿ ತಿಳಿಯಬೇಕು. ಕೋಟ್ಯವಧಿ ಧನವನ್ನು ಕೂಡಿಸಿಟ್ಟು ಅದೆಲ್ಲ ತನ್ನದೆಂದು ಅಭಿಮಾನದಿಂದ ಯಾರಿಗೂ ದಾನಮಾಡದಿರುವವನು ದೊಡ್ಡ ಕಳ್ಳನಂತೆ ಶಿಕ್ಷೆಗೆ ಗುರಿಯಾಗಲು ಅರ್ಹನಾಗಿದ್ದಾನೆಂದು ಹೇಳಿದ್ದಾರೆ ಮನುಷ್ಯನು ಭಿಕಾರಿಯಾಗಬಾರದು. ತನ್ನತನ್ನ ಕೆಲಸವನ್ನು ಸರಿಯಾಗಿ ಮಾಡಬೇಕು ದೇವರು ಕೊಟ್ಟದ್ದುದರಲ್ಲಿ ತೃಪ್ತನಾಗಿರಬೇಕು ಅನ್ಯಾಯದಿಂದ ದ್ರವ್ಯವನ್ನು ಸಂಪಾದಿಸಬಾರದು. ಯದೃಚ್ಛೆಯಿಂದ ಅಧಿಕ ಧನವು ದೊರೆತರೆ ಅದನ್ನು ಸಮಾಜದ ಹಿತಕ್ಕಾಗಿ ದಾನಮಾಡಬೇಕು. ಸಿರಿವಂತರ ಕಡೆಗೆ ಹೋಗಿ

ಹಣವನ್ನು ಬೇಡಲೂಬಾರದು ಯಾಕೆಂದರೆ ಧನಿಕನ ಸಮೀಪಕ್ಕೆ ಹೋಗಿ ಸಾವಿರಾರು ಜನ ಬೇಡತೊಡಗಿದರೆ ಆ ಧನಿಕನು ಇಷ್ಟು ಜನರಿಂದ ತಾನು ಸೇವಿಸಲ್ಪಡುತ್ತಿದ್ದೇನೆಂದು ತಿಳಿದು ಧನಸಂಚಯದಿಂದಲೇ ತನಗೆ ಇಷ್ಟು ಮಹತ್ವವು ಪ್ರಾಪ್ತವಾಯ್ತೆಂದು ಭಾವಿಸಿ ಆ ಧನದಲ್ಲಿ ಮತ್ತಿಷ್ಟು ಅಭಿಮಾನ ಲೋಭಗಳನ್ನು ಮಾಡುವನು. ಅಲ್ಲದೆ ಹೆಚ್ಚೆಚ್ಚು ಧನ ಸಂಗ್ರಹವನ್ನು ಮಾಡಬೇಕೆಂದು ಬಗೆಯುತ್ತಾನೆ. "ಮಾ ಗೃಧಃ ಕಸ್ಯ ಸ್ವಿದ್ಧನಂ" ಎಂಬುದಾಗಿ ಈ ಉಪನಿಷತ್ತಿನಲ್ಲಿ ಹೇಳಿದಂತೆಯೂ "ಸ್ವೋಚಿತ ಕರ್ಮಗಳಾಚರಿಸುತ ಬಲು ನೀಚರಲ್ಲಿಗೆ ಪೋಗಿ ಯಾಚಿಸದೆ ಇರಬೇಕು" ಎಂದು ದಾಸಶ್ರೇಷ್ಠರೊಬ್ಬರು ಹೇಳಿದಂತೆಯೂ ಧನಿಕನ ಬಳಿಗೆ ಹೋಗಿ ಭಿಕ್ಷೆಯನ್ನು ಬೇಡದಿದ್ದರೆ ಆ ಧನಿಕನಿಗೆ ತನ್ನ ಉಪಭೋಗಕ್ಕಿಂತ ಹೆಚ್ಚಿನ ಧನವು ಅನಾವಶ್ಯಕವೆಂದು ತೋರಿ ಅನ್ಯಾಯದಿಂದ ಧನವನ್ನು ಸಂಗ್ರಹಿಸಿಡುವ ಪ್ರವೃತ್ತಿಯನ್ನು ಬಿಟ್ಟುಕೊಡುವ ಸದ್ಬುದ್ಧಿಯುಂಟಾಗುವುದು ಆದುದರಿಂದ ಈ ಉಪನಿಷತ್ತಿನ ಉಪದೇಶವು ಸಮಾಜದ ಕಲ್ಯಾಣಕ್ಕೆ ಉತ್ತಮ ಕಾರಣವಾಗಿರುವುದೆಂಬಲ್ಲಿ ಸಂದೇಹವಿಲ್ಲ

ಈ ಉಪನಿಷತ್ತಿನಲ್ಲಿ 'ಅದ್ವೈತ'ವನ್ನು ಬೋಧಿಸಲಾಗಿದೆಯೆಂದೂ ಅದುವೇ ಸಮಾಜದ ಕಲ್ಯಾಣಕ್ಕೆ ಮುಖ್ಯ ಕಾರಣವೆಂದೂ ಕೆಲವರು ತಿಳಿದಿರುವರು. ಇದಕ್ಕೆ "ಏಕತ್ವಮನುಪಶ್ಯತಃ" ಎಂದು ಈ ಉಪನಿಷತ್ತಿನಲ್ಲಿ ಬಂದಿರುವ ಒಂದು ಮಾತನ್ನು ಆಧಾರವನ್ನಾಗಿ ಹೇಳುವುದುಂಟು ಆದರೆ ಈ ಮಾತಿನ ಸರಿಯಾದ ಅರ್ಥವನ್ನು ತಿಳಿದುಕೊಳ್ಳದಿರುವುದೇ ಈ ತಪ್ಪು ಕಲ್ಪನೆಗೆ ಕಾರಣವಾಗಿದೆ. ಪರಮಾತ್ಮನು ಸರ್ವಾಧಾರನಾಗಿ ಒಬ್ಬನೇ ಇದ್ದಾನೆಂದು ಜೀವನು ತಿಳಿಯಬೇಕೆಂಬುದೇ ಈ ಮಾತಿನ ನಿಜವಾದ ಅರ್ಥ. ಯಾಕಂದರೆ ಈ ವಾಕ್ಯದ ಉಪಕ್ರಮದಲ್ಲಿ "ಯಸ್ಮಿನ್ ಸರ್ವಾಣಿ ಭೂತಾನಿ" ಎಂದು ಸಪ್ತಮೀ ವಿಭಕ್ತಿಯಿರುವುದರಿಂದ ಪರಮಾತ್ಮನು ಸರ್ವಭೂತಾಧಾರನೆಂದು ಆಧಾರಾಧೇಯಭಾವದಿಂದ ಭೇದವನ್ನೇ ಹೇಳಿದೆಯೆಂಬುದನ್ನು ಮರೆಯಕೂಡದು ಹಾಗೆಯೇ ಉಪನಿಷತ್ತಿನ ಆರಂಭದಲ್ಲಿಯೆ "ಈಶಾವಾಸ್ಯಮಿದಂ ಸರ್ವಂ" ಎಂದು ಈಶ ಶಬ್ದವನ್ನು ಪ್ರಯೋಗಿಸಿ ಸ್ವಾಮಿ ಭೃತ್ಯ ಭಾವವನ್ನು ಪ್ರತಿಪಾದಿಸಿರುವುದು ಸ್ಪಷ್ಟವಾಗಿದೆ. ಅದರಂತೆಯೆ ಕೊನೆಯಲ್ಲಿ ಅಂದರೆ ಉಪಸಂಹಾರದಲ್ಲಿ "ನಮ ಉಕ್ತಿಂ ವಿಧೇಮ" ಎಂದು ಈಶ್ವರನಿಗೆ ನಮಸ್ಕಾರವನ್ನು ಹೇಳಿರುವುದರಿಂದ ಜೀವೇಶ್ವರ

ರಲ್ಲಿ ಉತ್ಕರ್ಷಾಪಕರ್ಷಗಳನ್ನು ತಿಳಿಸಿ ಭೇದವನ್ನು ಪ್ರತಿಪಾದಿಸಿದ್ದುದೂ ನಿಚ್ಚಳ ವಾಗಿದೆ. ಹೀಗೆ ಉಪಕ್ರಮೋಪಸಂಹಾರಕ್ಕೆ ಅಸಂಗತವಾಗಿ ಮಧ್ಯದಲ್ಲಿ ಅದ್ವೈತವನ್ನೂ ಅಭೇದವನ್ನೂ ಹೇಳುವುದು ಅಪೌರುಷೇಯವಾದ ಪರಮ ಪ್ರಮಾಣವಾದ ವೇದಕ್ಕೆ ಯೋಗ್ಯವಾಗುವುದಿಲ್ಲ

ಅದ್ವೈತೋಪಾಸನೆಯಿಂದಲೂ ಅಭೇದೋಪದೇಶದಿಂದಲೂ ಎಲ್ಲ ರಲ್ಲಿಯೂ ಆತ್ಮೈಕ್ಯಭಾವವು ಬೆಳೆದು ಸಮಾಜದಲ್ಲಿಯ ರಾಗದ್ವೇಷಾದಿಗಳ ನಾಶಕ್ಕೆ ಸಹಾಯವಾಗುವುದೆಂದೂ ಅದರಿಂದ ಸಮಾಜದ ನಿಜವಾದ ಕಲ್ಯಾಣಕ್ಕೆ ಸಹಾಯವಾಗುವುದೆಂದೂ ಕೆಲವರು ಹೇಳುವುದುಂಟು. ಆದರೆ ಸರಿಯಾಗಿ ವಿಚಾರ ಮಾಡಿದರೆ ಇದು ಸರಿಯಲ್ಲೆಂದು ತಂತಾನೆ ಗೊತ್ತಾಗಬಲ್ಲದು. ಹೇಗೆಂದರೆ ಎಲ್ಲ ಆತ್ಮರಿಗೂ ತನಗೂ ಐಕ್ಯವುಂಟೆಂದು ತಿಳಿದವನು ಪರರಿಗೆ ಕಲ್ಯಾಣ ಮಾಡುವುದಕ್ಕೆ ಪ್ರಯತ್ನವನ್ನೇ ಮಾಡಲಾರನು, ತನ್ನ ಕಲ್ಯಾಣ ವನ್ನು ತಾನು ಮಾಡಿಕೊಂಡರೆ ಸುಲಭವಾಗಿ ಎಲ್ಲರೂ ಕಲ್ಯಾಣವನ್ನು ಹೊಂದುವರೆಂದು ಆತನು ತಿಳಿದುಕೊಂಡರೆ ತಪ್ಪೇನು? ತನ್ನ ಸುಖವೇ ಸುಖ ವೆಂದು ಭಾವಿಸಿ ಪರರ ದುಃಖವನ್ನು ನಿವಾರಿಸಲು ಯತ್ನಿಸದೇ ಉಳಿಯಬಹುದು. ಅದೇಕೆ ? ಪರರ ದುಃಖವೆಲ್ಲ ಮಿಥ್ಯೆಯೆಂದು ಭಾವಿಸಿಬಿಡಲೂ ಬಹುದು. ಒಂದು ಸಮಯ ಇದಕ್ಕೆ ವಿರುದ್ಧವಾಗಿ ಪರರ ದುಃಖವೂ ಸತ್ಯವೆಂದು, ತಾನು ಸುಖವಾಗಿದ್ದುದೂ ನಿಜವೆಂದು ತಿಳಿದು ಪರದುಃಖಪರಿಹಾರಕ್ಕೆ ಪ್ರಯತ್ನಿಸಿದರೆ ಅದು ದ್ವೈತಭಾವನೆಯಾಗುತ್ತದೆ ಒಬ್ಬನು ಸುಖಿ, ಇನ್ನೊಬ್ಬನು ದುಃಖಿ ಯೆಂದು ತಿಳಿಯುವದು ದ್ವೈತವಷ್ಟೆ ! ಇನ್ನೊಬ್ಬನ ದುಃಖವು ಸತ್ಯವೆಂದು ತಿಳಿಯದೆ ಆ ದುಃಖವನ್ನು ಪರಿಹರಿಸುವಂತಿಲ್ಲ ದುಃಖವು ಸತ್ಯವೆಂದು ತಿಳಿದರೆ ಕೂಡಲೆ ಅದ್ವೈತಜ್ಞಾನವು ನಷ್ಟವಾಯಿತು ಆದುದರಿಂದ ಅದ್ವೈತ ಜ್ಞಾನಿಗಳಿಂದ ಪರದುಃಖ ಪರಿಹಾರವೆಂಬ ಕಲ್ಯಾಣವಾಗುವಂತಿಲ್ಲ ಪರದುಃಖ ಪರಿಹಾರ ಮಾಡುವವರು ಅದ್ವೈತ ಜ್ಞಾನಿಗಳಲ್ಲ

ಇನ್ನು ಅದ್ವೈತಿಗಳು ಪರರೂ ತಾವೂ ಒಂದೇ ಎಂದು ಭಾವಿಸಿದ ಕಾರಣ ಪರರಿಗೆ ದುಃಖವನ್ನು ಕೊಟ್ಟರೆ ತಮಗೆ ತಾವೇ ದುಃಖ ವನ್ನುಂಟುಮಾಡಿಕೊಂಡಂತಾಗುವುದೆಂದು ತಿಳಿದು ಇನ್ನೊಬ್ಬರಿಗೆ ಎಂದೂ ಹಿಂಸೆಯನ್ನು ಮಾಡಲಾರರು, ಆದುದರಿಂದ ಅದ್ವೈತಜ್ಞಾನವು ಸಮಾಜ

ಕಲ್ಯಾಣಕ್ಕೆ ಪೋಷಕವಾಗಿದೆಂದು ಹೇಳಿದರೆ ಅದೂ ಸರಿಯಾಗಲಾರದು. ಯಾಕೆಂದರೆ ಪರರೂ ತಾನೂ ಒಂದೆಂದು ತಿಳಿದ ಅದ್ವೈತಿಯು ಪರರಿಗೆ ಹಿಂಸೆ ಯನ್ನು ಮಾಡುವಾಗ ತನಗೆ ದುಃಖವಾಗದೆ ಇದ್ದುದನ್ನು ನೋಡಿ ತನ್ನಿಂದ ಅಭಿನ್ನನಾದ ಪರನಿಗೆ ದುಃಖವಾಗುವುದಿಲ್ಲೆಂದು ತಿಳಿದು ಕ್ರೀಡಾರೂಪವಾಗಿ ಪರರನ್ನು ಹಿಂಸಿಸಲೂ ಬಹುದು ಈ ರೀತಿಯಾಗಿ ಹಿಂಸೆಗೆ ಕಾರಣವಾದ ಅದ್ವೈತ ಜ್ಞಾನವು ಲೋಕಕಲ್ಯಾಣದ ಸಾಧನವಾಗಲಾರದು ಆದುದರಿಂದ ಅದ್ವೈತವನ್ನು ಈ ಉಪನಿಷತ್ತು ಬೋಧಿಸಲಾರದು

ಪರರು ತನ್ನಿಂದ ಭಿನ್ನರೆಂದು ತಿಳಿದ ದ್ವೈತಿಗಳಿಂದ ಲೋಕಕಲ್ಯಾಣ-ವೆಂತಾಗಬಲ್ಲದೆಂದು ಕೆಲವರು ಅನ್ನಬಹುದು "ಬಾಂಧವಾ ವಿಷ್ಣುಭಕ್ತಾಶ್ಚ" ಎಂಬ ತತ್ತ್ವವನ್ನು ಅವರು ಅನುಸರಿಸುವರಾದುದರಿಂದ ಸಜ್ಜನರಿಗೆ ಉಪಕಾರ ವನ್ನು ಮಾಡಲು ದ್ವೈತಿಗಳಿಗೆ ತುಂಬ ಅವಕಾಶವಿದೆ. ದುಷ್ಟರನ್ನು ಅಂದರೆ ಭಗವದ್ದ್ವೇಷಿಗಳನ್ನು ನಿಗ್ರಹಿಸಲು ಅರ್ಜುನನಂತೆ ಇವರಿಗೂ ಎಡೆಯಿದೆ ಆದರೆ ಅದ್ವೈತಜ್ಞಾನಿಗಳಿಗೆ ದುಷ್ಟನಿಗ್ರಹದ ಈ ಅವಕಾಶವು ದೊರೆಯಲಾರದು. ಯಾಕೆಂದರೆ ದುಷ್ಟರಲ್ಲಿಯೂ ತಮ್ಮಲ್ಲಿಯೂ ಭೇದವಿಲ್ಲೆಂದು ತಿಳಿದ ಬಳಿಕ ತಮ್ಮ ನಿಗ್ರಹಕ್ಕೆ ತಾವೇ ಪ್ರಯತ್ನವನ್ನು ಮಾಡಿದಂತಾಗುತ್ತದೆ. ಆದುದರಿಂದ ಶ್ರೀಕೃಷ್ಣನು ಗೀತೆಯಲ್ಲಿ ಅರ್ಜುನನನ್ನು ದು ಷ್ಟ ನಿ ಗ್ರ ಹ ದ ಲ್ಲಿ ಪ್ರವೃತ್ತಿ ಮಾಡಿಸಿದವನು ಅದಕ್ಕೆ ವಿರುದ್ಧವಾದ ಅದ್ವೈತವನ್ನು ಹೇಗೆ ತಾನೆ ಬೋಧಿಸ ಬಲ್ಲನು ? ದುಷ್ಟನಿಗ್ರಹವಿಲ್ಲದೆ ಸಜ್ಜನರ ಕಲ್ಯಾಣವಾಗಲಾರದು ಅಂದ ಮೇಲೆ ದುಷ್ಟನಿಗ್ರಹಕ್ಕೆ ವಿರೋಧಿಯಾದ ಅದ್ವೈತಜ್ಞಾನವು ಸಜ್ಜನರ ಕಲ್ಯಾಣ ಹೇತುವಾಗುವುದೆಂತು ? "ಯೋಽಸಾವಸೌ ಪುರುಷಃ ಸೋಽಹಮಸ್ಮಿ" ಎಂಬ ವಾಕ್ಯವು ಮುಖ್ಯ ವೃತ್ತಿಯಿಂದ ಅದ್ವೈತವನ್ನು ಬೋಧಿಸುವುದಿಲ್ಲೆಂದು ಅದ್ವೈತಿ ಗಳೇ ಒಪ್ಪಿದ್ದಾರೆ ಯಾಕೆಂದರೆ 'ಅಹಂ' ಶಬ್ದಾರ್ಥವು ಆತ್ಮನಲ್ಲ, ಎಂದು ಅವರು ಒಪ್ಪಿಕೊಂಡಿರುವರು ಆದುದರಿಂದ 'ಅಹಂ' ಶಬ್ದಕ್ಕೆ ಲಕ್ಷಣಾವೃತ್ತಿ ಯಿಂದ ಅಮುಖ್ಯವಾದ ಆತ್ಮಾ ಎಂದು ಅರ್ಥವನ್ನು ಅವರು ಹೇಳುತ್ತಾರೆ. ದ್ವೈತ ಸಿದ್ಧಾಂತದಲ್ಲಿ ಅಹಮಾದಿ ಶಬ್ದಗಳು ಅಂತರ್ಯಾಮಿ ಪರಮಾತ್ಮನಲ್ಲಿ ಮುಖ್ಯವಾದವುಗಳೆಂದು "ಅಂತರ್ಯಾಮಿಣಮೀಶೇಶಂ ಅಪೇಕ್ಷ್ಯಾಹಂ ತ್ವಮಿ ತ್ಯಪಿ | ಸರ್ವೇ ಶಬ್ದಾಃ ಪ್ರಯುಜ್ಯಂತೇ" ಎಂಬ ಪ್ರಮಾಣ ಪ್ರಕಾರ ಹೇಳು

ವುದರಿಂದ ಆ ವಾಕ್ಯವು ದ್ವೈತ ಸಿದ್ಧಾಂತಕ್ಕೆಯೇ ಅನುಕೂಲವಾಗಿದೆ. ಪರಮಾತ್ಮನ ಪ್ರಾರ್ಥನಾರೂಪವಾದ ಈ ವಾಕ್ಯಕ್ಕೆ ಜೀವಬ್ರಹ್ಮೈಕ್ಯರೂಪವಾದ ಅರ್ಥ ಹೇಳಿದರೆ ದರಿದ್ರನಾದ ಯಾಚಕನು ರಾಜನನ್ನು ನೀನು ನಾನು ಒಂದು ಎಂದು ಹೇಳಿದಂತೆಯೇ ಆಗುತ್ತದೆ ಮೋಕ್ಷದಲ್ಲಿ ಐಕ್ಯ ಬರುವುದಾದರೂ ಈಗ ವ್ಯಾವಹಾರಿಕ ಭೇದ ಇದೆ ಆದ್ದರಿಂದ ಪ್ರಾರ್ಥನೆಯು ಕೂಡುತ್ತದೆಂದು ಹೇಳು ವುದೂ ಸರಿ ಅಲ್ಲ "ಸೋಽಹಮಸ್ಮಿ" ಎಂಬಲ್ಲಿ ವರ್ತಮಾನಾರ್ಥಕ ಅಸ್ಮಿ ಎಂಬ 'ಲಟ್'ಪ್ರಯೋಗದಿಂದ ಈಗಲೂ ಐಕ್ಯವಿದೆ ಎಂದು ಅರ್ಥವಾಗುತ್ತಿರುವಾಗ ಪ್ರಾರ್ಥನೆಗೆ ಅವಕಾಶ ಎಲ್ಲಿ?

ಲೋಕಕಲ್ಯಾಣಕರವಾದ ಈ ವೇದೋಪನಿಷತ್ತಿಗೆ ತ್ರೈವರ್ಣಿಕರಾಗಿ ಉಪನಯನಾದಿ ಸಂಸ್ಕಾರವನ್ನು ಹೊಂದಿ ಗುರುದೇವತಾ ಭಕ್ತಿ ಮುಂತಾದ ಗುಣಗಳಿಂದೊಡಗೂಡಿ ಬ್ರಹ್ಮಚರ್ಯಾದಿ ಕಠಿಣ ನಿಯಮ ಪರಿಪಾಲನೆಯನ್ನು ಮಾಡುವ ಪುರುಷರೇ ಅಧಿಕಾರಿಗಳಾಗುತ್ತಾರೆ ಸ್ತ್ರೀ ಶೂದ್ರಾದಿಗಳು ಇದರ ಅಧ್ಯಯನ ಶ್ರವಣಾದಿಗಳಿಗೆ ಅಧಿಕಾರಿಗಳಲ್ಲ ಹೀಗೆಂದು ಹೇಳಿದರೆ ಕೆಲವರು ಅವಿವೇಕಿಗಳು ಜಾತಿದ್ವೇಷದ ಲಕ್ಷಣವಿದುಯೆಂದು ಆಕ್ಷೇಪಿಸುವರು ಇದು ದ್ವೇಷಮೂಲಕವೇ ಆಗಿದ್ದರೆ ಸ್ತ್ರೀ ಶೂದ್ರಾದಿಗಳಿಗೆ ಮೋಕ್ಷವೇ ಇಲ್ಲೆಂದು ಹೇಳಬೇಕಾಗುತ್ತಿತ್ತು ಆದರೆ ಹಾಗೆ ಯಾರೂ ಎಲ್ಲಿಯೂ ಹೇಳಲಿಲ್ಲ. ಇದಕ್ಕೆ ವಿರುದ್ಧವಾಗಿ ಭಾರತಾದಿ ಜ್ಞಾನದಿಂದ ಸ್ತ್ರೀಶೂದ್ರಾದಿಗಳೂ ಭಗವನ್ನಾಮಜ್ಞಾನ ದಿಂದ ಅಂತ್ಯಜಾದಿಗಳೂ ಮೋಕ್ಷವನ್ನು ಸುಲಭವಾಗಿ ಸಾಧಿಸುತ್ತಾರೆಂದು ಹೇಳಿರುವರು ಆದುದರಿಂದ ದ್ವೇಷಕ್ಕೆ ಎಲ್ಲಿಯೂ ಅವಕಾಶವಿಲ್ಲ ಈ ವಿಷಯ ವನ್ನು ಅನೇಕ ದೃಷ್ಟಾಂತಗಳಿಂದ ಇನ್ನಷ್ಟು ಸ್ಪಷ್ಟಪಡಿಸಬಹುದು. ಉದಾಹರಣೆ ಗಾಗಿ ನೀರುಳ್ಳಿ (ಉಳ್ಳೀಗಡ್ಡಿ) ಮುಂತಾದವುಗಳು ನಿಷಿದ್ಧಗಳೆಂದು ಶಾಸ್ತ್ರದಲ್ಲಿ ಹೇಳಿರುವುದು. ಅದರ ಮೇಲಿನ ದ್ವೇಷದಿಂದಲೇ ಹೀಗೆ ಹೇಳಿದೆಯೆಂದು ಯಾರಾದರೂ ಹೇಳಬಲ್ಲರೋ? ಹಾಗೆಯೆ ಕೃಷ್ಣಾಜಿನವು ಪವಿತ್ರವೆಂದೂ ಗೋಚರ್ಮವು ಅಸ್ಪೃಶ್ಯವೆಂದೂ ಹೇಳುತ್ತಿರುವವರು ಗೋದ್ವೇಷಿಗಳಿರದೆ ಗೋಪೂಜಕರೇ ಅಲ್ಲವೆ? ಆಂದಬಳಿಕ ದ್ವೇಷದ ಪ್ರಸಕ್ತಿಯು ಎಲ್ಲಿಂದ ಬಂತು? ಅಲ್ಲಿ ಬೇರೆ ಕಾರಣಗಳಿದ್ದಂತೆ ಇಲ್ಲಿಯೂ ಇರಬಹುದಲ್ಲವೆ? ಸ್ತ್ರೀ ಶೂದ್ರಾದಿಗಳು ವೇದ ಪಠನಾದಿಗಳಿಗೆ ಅನಧಿಕಾರಿಗಳೆಂದು ಹೇಳಿದ ಶಾಸ್ತ್ರದಲ್ಲಿಯೇ ವೇದಾಧಿ-

ಕಾರಿಗಳಾದ ತ್ರೈವರ್ಣಿಕರು ಭಗವದ್ಭಕ್ತ್ಯಾದಿ ಗುಣದಲ್ಲಿ ಕಡಿಮೆಯಿದ್ದು ವೇದಾನಧಿಕಾರಿಗಳಾದ ಶೂದ್ರಾದಿಗಳು ಅಧಿಕ ಭಕ್ತಿ ಗುಣಶಾಲಿಗಳಾಗಿದ್ದರೆ ಆ ತ್ರೈವರ್ಣಿಕರಿಗಿಂತಲೂ ಆ ಶೂದ್ರಾದಿಗಳೇ ಹೆಚ್ಚಿನ ಗೌರವಾದರಗಳಿಗೆ ಪಾತ್ರರಾಗುತ್ತಾರೆಂದು "ಆದರಸ್ತತ್ರ ಕರ್ತವ್ಯಃ ಯತ್ರ ಭಕ್ತಿರ್ಹರೇರ್ವರಾ" ಎಂಬಿವೇ ಮೊದಲಾದ ಮಾತುಗಳಿಂದ ಹೇಳಲಾಗಿದೆ.

ಸ್ನಾನಾದಿಗಳಿಂದ ಶುಚಿಯಾದ ಸಣ್ಣ ವಟುವು ಪ್ರತಿಮೆಯನ್ನು ಸ್ಪರ್ಶ ಮಾಡಿ ಪೂಜೆ ಮಾಡಲು ಅರ್ಹನಾಗುತ್ತಾನೆ ಆದರೆ ಆ ವಟುವಿನ ಹಿರಿಯರು ಜ್ಞಾನಿಗಳೂ ವೃದ್ಧರೂ ಇದ್ದರೂ ಸ್ನಾನಾದಿಗಳನ್ನು ಮಾಡದೆ ಅಶುಚಿಗಳಾಗಿದ್ದರೆ ಪ್ರತಿಮಾಸ್ಪರ್ಶಕ್ಕೆ ಅನಧಿಕಾರಿಗಳಾಗುವರು ಈ ಮಾತನ್ನು ಶಾಸ್ತ್ರವನ್ನೂ ಸಂಪ್ರದಾಯವನ್ನೂ ತಿಳಿದಿರುವವರು ಚೆನ್ನಾಗಿ ಬಲ್ಲರು. ಅಷ್ಟೇಕೆ? ಎಲ್ಲ ಧರ್ಮಜಾತಿಗಳಲ್ಲಿಯೂ ಇಂತಹ ಅರ್ಹತೆಗಳನ್ನು ವಿವರಿಸಿದ ಸಂಪ್ರದಾಯ ಗಳಿದ್ದೇ ಇರುವವು. ಅದರಂತೆ "ಬ್ರಾಹ್ಮಣೋ ವೈ ಸರ್ವಾ ದೇವತಾ" ಅಂದರೆ ಬ್ರಾಹ್ಮಣದೇಹದಲ್ಲಿ ಸಮಸ್ತ ದೇವತೆಗಳ ಸನ್ನಿಧಾನವಿರುವುದರಿಂದ ಅವನು ಪವಿತ್ರ ದೇಹವುಳ್ಳವನಾಗಿರುವ ಕಾರಣ ಆತನೇ ಮುಖ್ಯ ವೇದಾಧಿಕಾರಿಯಾಗು ತ್ತಾನೆಂದು ಶಾಸ್ತ್ರವು ಹೇಳುತ್ತದೆ ಗೋವಿನ ಚರ್ಮ ಕೃಷ್ಣಾಜಿನ, ನರಮಯ ಗೋಮಯ, ಇತರ ಎಲುಬು ಶಂಖ ಇವುಗಳಲ್ಲಿ ತಾರತಮ್ಯವಿದೆ ಕೃಷ್ಣಾ ಜಿನವು ದೇವರ ಪೆಟ್ಟಿಗೆಗೆ ಆವರಣವಾಗುತ್ತದೆ. ಗೋಮಯವು ದೇವರ ಮನೆ ಯನ್ನು ಸಾರಿಸಿ ಶುದ್ಧಮಾಡಲಿಕ್ಕೆ ಬೇಕಾಗುತ್ತದೆ. ಶಂಖವು ಶಾಲಿಗ್ರಾಮಕ್ಕೆ ಅಭಿಷೇಕವನ್ನು ಮಾಡಲು ಮತ್ತು ಪೂಜೆಗೆ ಅವಶ್ಯವಾಗಿ ಬೇಕಾಗುತ್ತದೆ ಗೋಮಯ ಶಂಖಗಳಲ್ಲಿ ಲಕ್ಷ್ಮೀಸನ್ನಿಧಾನವಿದೆಯೆಂದು ಶಾಸ್ತ್ರದಿಂದಲೇ ತಿಳಿದುಕೊಳ್ಳುವಂತೆ ಬ್ರಾಹ್ಮಣಾದಿಗಳ ದೇಹದ ಪಾವಿತ್ರ್ಯವನ್ನು ಶಾಸ್ತ್ರ ದಿಂದಲೇ ತಿಳಿದು ಸಮಾಧಾನ ಹೊಂದಬೇಕು ಬ್ರಾಹ್ಮಣನು ಇತರ ವರ್ಣ ದವರೊಡನೆ ಸಹಭೋಜನ–ವಿವಾಹಾದಿ ಸಂಸರ್ಗ ಮಾಡಿದರೆ ಅವನು ವೇದಾಧಿಕಾರಿಯಾಗಲಾರನು

ಇತ್ತೀಚೆಗೆ ಕೆಲ ಮಹನೀಯರು ಮಾನವರಲ್ಲಿ ಸ್ತ್ರೀಪುರುಷ ಜಾತಿ ಭೇದದ ಹೊರತು ಬೇರೆ ಜಾತಿ ಭೇದವಿಲ್ಲೆಂದು ಹೇಳುತ್ತಿರುವರು. ಆದರೆ ಈ ಮಾತಿಗೆ ಅನುಭವದ ಆಧಾರವಿಲ್ಲ ಯಾಕಂದರೆ ಮಾವಿನ ಹಣ್ಣುಗಳಲ್ಲಿ

ಅನೇಕ ಜಾತಿಗಳಿವೆ ಇದರಂತೆ ಯಾವ ವಸ್ತುವನ್ನು ವಿಚಾರ ಮಾಡಿದರೂ ನೂರಾರು ಅವಾಂತರ ಭೇದಗಳಿರುವವೆಂಬ ಸಂಗತಿಯು ಗೊತ್ತಾಗುತ್ತದೆ. ಹೀಗಿರುವಾಗ ಸ್ತ್ರೀಪುರುಷರಲ್ಲಿ ಜಾತಿಭೇದಗಳಿಲ್ಲೆಂದು ಹೇಗೆ ಹೇಳಲಿಕ್ಕಾಗುದೀತು ? ಉಳಿದ ಎಲ್ಲ ವಸ್ತುಗಳಲ್ಲಿ ಅವಾಂತರ ಭೇದಗಳುಂಟೆಂದ ಮೇಲೆ ಇಲ್ಲಿ ಮಾತ್ರ ಒಪ್ಪದಿರುವುದು ವಸ್ತುಸ್ವಭಾವಕ್ಕೆ ವಿರುದ್ಧವಾಗುವುದಿಲ್ಲವೆ ?

ಇನ್ನು ಈ ಉಪನಿಷತ್ತಿನ ಪ್ರತಿಪದಾರ್ಥ ವಿಚಾರವನ್ನು ಮಾಡುವ. ಈಶಾವಾಸ್ಯಂ' ಎಂಬ ಆದಿಮ ಮಂತ್ರದ ಪದವು ಜಗತ್ತು ಈಶನಿಂದ ಆಚ್ಛಾದಿಸಲ್ಪಡುತ್ತದೆಯೆಂದು ಹೇಳುತ್ತ ಜಗತ್ತಿನ ಮಿಥ್ಯಾತ್ವವನ್ನು ಪ್ರತಿಪಾದಿಸುತ್ತದೆಯೆಂದು ಅದ್ವೈತ ಭಾಷ್ಯದಲ್ಲಿ ಹೇಳಿದೆ ಇದು ಬಹಳ ಆಶ್ಚರ್ಯದ ವಿಷಯ ಯಾಕಂದರೆ ಆಚ್ಛಾದಿಸಲ್ಪಟ್ಟದು ಮಿಥ್ಯೆಯಾಗಿ ಎಲ್ಲಿಯೂ ಕಂಡಿಲ್ಲ. ಚಂದನ ಖಂಡವು (ಗಂಧದ ಕೊರಡು) ನೀರಿನ ಸಂಪರ್ಕದಿಂದ ಕೊಳೆತು ದುರ್ಗಂಧವಾಗುತ್ತದೆ ಅದನ್ನು ತಿಕ್ಕಿದರೆ ಒಳಗಿನ ಸುಗಂಧವು ಹೊರಹೊಮ್ಮುತ್ತದೆ ಅದರಿಂದ ಮೊದಲು ಅನುಭೂತವಾದ ದುರ್ಗಂಧವು ಆಚ್ಛಾದಿತವಾಗಿರುತ್ತದೆ ಆ ದುರ್ಗಂಧವು ಮಿಥ್ಯೆ ಅದರಂತೆಯೆಂದು ದೃಷ್ಟಾಂತವು ಆ ಭಾಷ್ಯದಲ್ಲಿದೆ ಆದರೆ ಆ ದೃಷ್ಟಾಂತವೇ ಸರಿಯಾಗಿಲ್ಲ ಅದನ್ನು ಒಪ್ಪಲಾಗುವುದಿಲ್ಲ. ಯಾಕಂದರೆ ಚಂದನಖಂಡವು ಕೊಳೆತ ಪ್ರಯುಕ್ತ ದುರ್ಗಂಧಯುಕ್ತವಾದುದು ನಿಜವೇ ಹೊರತು ಮಿಥ್ಯೆಯಲ್ಲ ಜಗತ್ತು ಮಿಥ್ಯೆಯೆಂದರೆ ಪರಮಾತ್ಮನು ಈಶನು ಎಂದು ಈಶಾವಾಸ್ಯಂ ಎಂಬಲ್ಲಿ ಹೇಳುವುದಾದರೂ ಹೇಗೆ ? ರಾಜ್ಯವೇ ಇಲ್ಲವಾದರೆ ರಾಜನು ಎಂಬುದು ಅಯುಕ್ತವಾಗುವಂತೆ ಈಶನು ಎಂಬುವುದೂ ಯುಕ್ತವಾಗುವುದಿಲ್ಲ

'ಕುರ್ವನ್ನೇವೇಹ ಕರ್ಮಾಣಿ' ಎಂಬ ಎರಡನೆಯ ಮಂತ್ರದಲ್ಲಿ ಅಜ್ಞಾನಿಯಾಗಿ ಆತ್ಮನನ್ನು ಅರಿತುಕೊಳ್ಳಲು ಶಕ್ತಿಯಿಲ್ಲದವನಿಗೆಯೇ ಕರ್ಮನಿಷ್ಠೆಯನ್ನು ಉಪದೇಶಿಸಿದೆಯೆಂದು ಅದ್ವೈತಭಾಷ್ಯದಲ್ಲಿ ಬರೆದಿದೆ ಶ್ರೀ ಶಂಕರಾಚಾರ್ಯರು ಜ್ಞಾನಿಗಳಲ್ಲವೆ ? ಅವರಿಗೆ ರಾಗದ್ವೇಷಾದಿಗಳ ಕಾರ್ಯವಾದ ಶೃಂಗೇರಿಯ ಶಾರದಾಪ್ರತಿಷ್ಠೆ ಬೌದ್ಧಮತ ಖಂಡನಾದಿ ಕರ್ಮಗಳು ವಿರುದ್ಧವಲ್ಲವೆ ? ಅವರು ಕರ್ಮಾನಧಿಕಾರಿಗಳಾದ ಮೇಲೆ ಕರ್ಮವನ್ನು ಮಾಡಿದ್ದು ಅಯುಕ್ತವಲ್ಲವೆ ? ಲೋಕಸಂಗ್ರಹಕ್ಕಾಗಿ ಮಾಡಿದರೆಂದರೆ ಮಿಥ್ಯಾಲೋಕವು

ಜ್ಞಾನಿಗಳಾದ ಶಂಕರಾಚಾರ್ಯರಿಗೇ ಕಾಣಿಸದಿದ್ದ ಬಳಿಕ ಲೋಕಸಂಗ್ರಹ ವಾದರೂ ಹೇಗೆ ? ಶುಕ್ತಿಯು ತತ್ತ್ವಜ್ಞಾನಿಗೆ ಬೆಳ್ಳಿಯಾಗಿ ಕಾಣುವುದಿಲ್ಲ ಅವನು ಬೆಳ್ಳಿಯನ್ನು ತೆಗೆಯಲು ಪ್ರವೃತ್ತಿಸುವುದಿಲ್ಲವಷ್ಟೇ ! ಜ್ಞಾನಿಗಳಾದ ಶಂಕರಾ-ಚಾರ್ಯರಿಗೆ ಪ್ರಾರಬ್ಧಕರ್ಮಾಧೀನವಾಗಿ ಲೋಕವು ಕಾಣುತ್ತದೆ ಆ ಪ್ರಾರಬ್ಧ ಕರ್ಮವು ಭೋಗದಿಂದ ನಾಶವಾಗಬೇಕು ಎಂದರೆ ಪ್ರಾರಬ್ಧ ಕರ್ಮವೂ ಎಲ್ಲ ವಸ್ತುಗಳಂತೆ ಮಿಥ್ಯೆಯಾದ ಮೇಲೆ ಜ್ಞಾನಿಗಳಿಗೆ, ಚಿಪ್ಪಿನ ಜ್ಞಾನಿಗಳಿಗೆ ಬೆಳ್ಳಿಯಂತೆ, ಭಾಸಮಾನವಾಗಲಾರದು ಅದರ ಕಾರ್ಯವಾದ ಭೋಗವೂ ಆಗಲಾರದು ಬೆಳ್ಳಿಯು ಸುಳ್ಳೆಂದು ತಿಳಿದ ಮೇಲೆ ಆ ಬೆಳ್ಳಿಯಿಂದ ಯಾವ ಕಾರ್ಯವೂ ಆಗಲಾರದಷ್ಟೇ ! ಈ ಬೆಳ್ಳಿಯು ಸತ್ಯವೆಂದು ಭ್ರಮಿಸಿದಾಗ ಮಾತ್ರ ಅದರಿಂದ ಅವನು ಸಂತೋಷಪಡುತ್ತಾನೆ ಎಂಟನೇ ಮಂತ್ರದಲ್ಲಿ "ಅಕಾಯಂ" ಎಂಬ ಪದಕ್ಕೆ ಪರಬ್ರಹ್ಮನು ಅಶರೀರನು ಎಂದು ಪರಭಾಷ್ಯ ಕಾರರು ವ್ಯಾಖ್ಯಾನಮಾಡಿದ್ದಾರೆ ಆದರೆ ಅದು ಈ ಉಪನಿಷತ್ತಿನ ಹದಿನಾರನೆಯ ಮಂತ್ರದ "ಯತ್ತೇ ರೂಪಂ ಕಲ್ಯಾಣತಮಂ" ಎಂಬ ಕಲ್ಯಾಣತಮ ಶರೀರ ವನ್ನು ಹೇಳುವ ಮಾತಿಗೆ ವಿರುದ್ಧವಾಗುತ್ತದೆ ಆದುದರಿಂದ "ಅಕಾಯಂ" ಎಂದರೆ ಪ್ರಾಕೃತ ಶರೀರ ಇಲ್ಲದವನು ಎಂದೇ ಅರ್ಥಮಾಡಬೇಕು.

ಒಂಬತ್ತನೆಯ ಮಂತ್ರದಲ್ಲಿ "ಅಗ್ನಿಹೋತ್ರಾದಿ ಕರ್ಮವು ವಿದ್ಯಾವಿರೋಧಿ ಯಾದುದರಿಂದ ಅವಿದ್ಯೆಯೆಂದು ಹೇಳಿಸಿಕೊಳ್ಳಲ್ಪಡುತ್ತಿದೆ ವಿದ್ಯೆಯೆಂಬ ಶಬ್ದಕ್ಕೆ ದೇವತಾಜ್ಞಾನವೆಂದು ಅರ್ಥ" ಎಂದು ಶಂಕರಾಚಾರ್ಯರು ಹೇಳುತ್ತಾರೆ ವಿದ್ಯೆಯೆಂಬ ಶಬ್ದಕ್ಕೆ ಪ್ರಸ್ತುತ ಬ್ರಹ್ಮವಿದ್ಯೆಯೆಂದು ಅರ್ಥವನ್ನು ಮಾಡಲು ಬರುವಾಗ ಅಪ್ರಸ್ತುತವಾದ ದೇವತಾಜ್ಞಾನ ಎಂಬ ಅರ್ಥವನ್ನು ಹೇಳಿದುದು ಅಸಂಗತವಲ್ಲವೆ ? ದೇವತಾಜ್ಞಾನರೂಪ ವಿದ್ಯೆಗೆ ಅಗ್ನಿಹೋತ್ರಾದಿ ಕರ್ಮವು ವಿರೋಧಿಯೆಂದು ಹೇಳುವುದು ಅವರ ಸಿದ್ಧಾಂತಕ್ಕೇ ವಿರುದ್ಧವಾಗುತ್ತದೆ ಯಾಕಂದರೆ ಮುಂದಿನ ಮಂತ್ರದ ವ್ಯಾಖ್ಯಾನವನ್ನು ಮಾಡುವಾಗ ಅವುಗಳಿಗೆ ಸಮುಚ್ಚಯವನ್ನು ಅವರೇ ಹೇಳಿರುತ್ತಾರೆ ಆದುದರಿಂದ ಅವಿದ್ಯೆಯೆಂದರೆ ಬ್ರಹ್ಮವಿದ್ಯೆಗೆ ವಿರೋಧಿ-ಕರ್ಮ ಎಂದು ಅರ್ಥ ಮಾಡಬೇಕಾಯಿತು ಆಗ ಸಮೀಪದಲ್ಲಿ ವಿದ್ಯಾಶಬ್ದದಿಂದ ಪ್ರಸ್ತುತವಾದ ದೇವತಾಜ್ಞಾನವನ್ನು ಬಿಟ್ಟು ಹಿಂದೆ ಪ್ರಸ್ತುತವಾದ ಬ್ರಹ್ಮವಿದ್ಯೆಯನ್ನು ಇಟ್ಟುಕೊಳ್ಳಬೇಕಾಗುತ್ತದೆ.

ಇದೊಂದು ಕ್ಲಿಷ್ಟ ಕಲ್ಪನೆಯೆ ಸರಿ ಮತ್ತು ಜ್ಞಾನಿಗಳೂ ಕರ್ಮವನ್ನು ಮಾಡು ತ್ತಾರೆ, ಆದುದರಿಂದ ಕರ್ಮವು ಜ್ಞಾನವಿರೋಧಿ ಎಂಬ ಅರ್ಥವೂ ಸರಿಹೋಗುವ ದಿಲ್ಲ. 'ಅನ್ಯದಾಹುರವಿದ್ಯಯಾ' ಎಂಬಲ್ಲಿ ಕರ್ಮದಿಂದ ಪಿತೃಲೋಕ ಪ್ರಾಪ್ತಿ- ರೂಪವಾದ ಫಲವನ್ನು ಹೇಳಿ ಅದರ ವಿವರಣರೂಪವಾದ "ಅವಿದ್ಯಯಾ ಮೃತ್ಯುಂ ತೀರ್ತ್ವಾ" ಎಂಬಲ್ಲಿ ಕರ್ಮಕ್ಕೆ ಮೃತ್ಯುತರಣರೂಪ ಫಲವನ್ನು ಹೇಳುವುದು ಅಸಂಗತವಾಗುತ್ತದೆ ಮೃತ್ಯುತರಣವೆಂದರೆ ಸಂಸಾರದಿಂದ ಬಿಡುಗಡೆಯೆಂಬ ಪ್ರಸಿದ್ಧವಾದ ಅರ್ಥವಿರುವಾಗ–ಸ್ವಾಭಾವಿಕ ಕರ್ಮಜ್ಞಾನಗಳನ್ನು ಮೃತ್ಯು ಶಬ್ದಾರ್ಥವನ್ನಾಗಿ ಹೇಳುವುದು ಅಯುಕ್ತವೇ ಸರಿ ಮತ್ತು ಅಗ್ನಿಹೋತ್ರಾದಿ ಕರ್ಮಗಳಿಗೆ ಸ್ವಾಭಾವಿಕ ಕರ್ಮಜ್ಞಾನಗಳಿಂದ ಬಿಡುಗಡೆ ಎಂಬ ಫಲವು ಸ್ಪಷ್ಟ ವಾದ ಬೇರೆ ಪ್ರಮಾಣದಿಂದ ಹೇಳಲ್ಪಡಲಿಲ್ಲ ಆದುದರಿಂದ ಆ ಅರ್ಥವು ಕಾಲ್ಪನಿಕವಾಗುತ್ತವೆ. ಬ್ರಹ್ಮವಿದ್ಯಾಪ್ರಕರಣಕ್ಕೆ ಸಂಬಂಧವಿಲ್ಲದ ದೇವತಾ ಜ್ಞಾನ ಕರ್ಮಗಳ ಸಮುಚ್ಚಯವನ್ನು ಹೇಳುವುದು ಅಸಂಗತವೇ ಆಗುತ್ತದೆ.

'ಸಂಭೂತಿ' ಎಂಬ ಶಬ್ದಕ್ಕೆ ಅಸಂಭೂತಿ ಎಂಬ ಅರ್ಥವನ್ನು ಶಂಕರಾ ಚಾರ್ಯರು ಹೇಳುತ್ತಾರೆ ಇದು ಎಂತಹ ಅನ್ಯಾಯ ! "ಸ ಆತ್ಮಾ ತತ್ತ್ವಮಸಿ" ಎಂಬಲ್ಲಿ ಶ್ರೀ ಮಧ್ವಾಚಾರ್ಯರು ಅತತ್ ತ್ವಮಸಿ ಎಂಬ ಛೇದ ಮಾಡಿದ್ದುದು ಕ್ಲಿಷ್ಟ ಕಲ್ಪನೆಯೆಂದು ಲೋಕಮಾನ್ಯ ಟಿಳಕರು ಗೀತಾರಹಸ್ಯದಲ್ಲಿ ಬರೆದಿರು ವರು ಅವರು ಶಂಕರಾಚಾರ್ಯರ ಈ ಭಾಷ್ಯವನ್ನು ನೋಡಲಿಲ್ಲೆಂದು ತೋರು ತ್ತದೆ "ಆತ್ಮಾ ತತ್ತ್ವಮಸಿ" ಎಂಬಲ್ಲಿ ಸವರ್ಣ ದೀರ್ಘ ಸಂಧಿ ಮಾಡಿದರೆ ವ್ಯಾಕರ ಣಕ್ಕೆ ಸಮ್ಮತವಾದ ಅರ್ಥವನ್ನೇ ಶ್ರೀ ಮಧ್ವಾಚಾರ್ಯರು ಹೇಳಿದ್ದುದಾಗುತ್ತದೆ. 'ಸಂಭೂತಿ' ಎಂಬ ಪದಕ್ಕೆ ಅಸಂಭೂತಿ ಎಂದು ಅರ್ಥ ಮಾಡಿದ್ದು ಯಾವ ವ್ಯಾಕರಣಕ್ಕೂ ಸಮ್ಮತವಲ್ಲ. ಹೀಗಿರುವಾಗ ಈ ಭಾಷ್ಯವು ಎಷ್ಟು ಕ್ಲಿಷ್ಟ ಕಲ್ಪನೆ ಯೆಂಬುದನ್ನು ವಾಚಕರೇ ತಿಳಿಯಬೇಕು. ಶ್ರೀ ಮಧ್ವಾಚಾರ್ಯರು ತಾವು ಹೇಳುವ ಅರ್ಥವು ಪುರಾಣ ಮುಂತಾದ ಪ್ರಮಾಣಗಳ ಆಧಾರದಿಂದಲೇ ಹೇಳಲ್ಪ ಟ್ಟಿದ್ದೆಂದು ಸ್ಪಷ್ಟಪಡಿಸಿರುವರು ಈ ರೀತಿಯಾಗಿ ಮಧ್ವಭಾಷ್ಯವು ಸಂಪೂರ್ಣ ವಾಗಿ ಪ್ರಾಮಾಣಿಕವೂ ಯುಕ್ತಿಯುಕ್ತವೂ ಆಗಿರುತ್ತದೆಂಬಲ್ಲಿ ಸಂದೇಹವಿಲ್ಲ.

**॥ ಇತಿ ಶಂ ॥**

**ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು**

# ಈಶಾವಾಸ್ಯೋಪನಿಷತ್

ಈ ಉಪನಿಷತ್ತಿಗೆ ಸ್ವಾಯಂಭುವ ಮನುವು ಋಷಿ ಯಜ್ಞನೆಂಬ ಹೆಸರುಳ್ಳ ಪರಮಾತ್ಮನು ಪ್ರತಿಪಾದ್ಯ ದೇವತೆ. ಆಯಾಮಂತ್ರಗಳ ಅಕ್ಷರಗಳ ಲೆಕ್ಕದಿಂದ ಅನುಷ್ಟುಪ್ ಮೊದಲಾದದ್ದು ಛಂದಸ್ಸು ಎಂದು ತಿಳಿಯಬೇಕು. ಸ್ವಾಯಂಭುವ ಎಂಬ ಮನು ತನ್ನ ಮಗಳಾದ ಆಕೂತಿ ಎಂಬವಳಲ್ಲಿ ಅವತರಿಸಿದ ಯಜ್ಞನಾಮಕ ವಿಷ್ಣುವನ್ನು ಈ ಮಂತ್ರಗಳಿಂದ ಸ್ತೋತ್ರ ಮಾಡಿದನು. ಅವನನ್ನು ತಿನ್ನಲು ಬಂದ, ರುದ್ರವರದಿಂದ ಅವಧ್ಯರಾದ ಕ್ರೂರ ರಾಕ್ಷಸರನ್ನು ಈ ಮಂತ್ರದಿಂದ ಸಂಹಾರ ಮಾಡಿದನು. "ಅನೇಜತ್" ಇತ್ಯಾದಿ ಮಂತ್ರದಿಂದ ತತ್ತ್ವವನ್ನು ವೇದಋಷಿಯು ಹೇಳುವನಾಗಿ ಉಪದೇಶ ವಿಷಯವಾದ ತತ್ತ್ವವು ಅಧಿಕಾರಿಯಾದವನ ಮನಸ್ಸಿನಲ್ಲಿ ಮಾತ್ರ ನಿಲ್ಲುವುದು ಬೇರೆಯವನಿಗಿಲ್ಲ ಎಂಬ ಆಶಯದಿಂದ ಈ ಉಪನಿಷತ್ತಿನ ಅಧಿಕಾರಸಿದ್ಧಿಗೋಸ್ಕರ ವಿಷಯತೃಷ್ಣೆಯ ತ್ಯಾಗವನ್ನು ಈ ಆದ್ಯ ಮಂತ್ರದಿಂದ ಸಯುಕ್ತಿಕವಾಗಿ ವಿಧಾನ ಮಾಡುತ್ತಾರೆ –

**ಈಶಾವಾಸ್ಯಮಿದಂ ಸರ್ವಂ ಯತ್ಕಿಂ ಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯ ಸ್ವಿದ್ಧನಂ ॥ ೧ ॥**

ಇದಂ = ಇದು ಎಂದು ತೋರುವ, ಯತ್‌ಕಿಂ ಚ ಜಗತ್=ಯಾವಾವ ವಸ್ತು ಇದೆಯೋ, ಸರ್ವಂ = ಆ ಸಮಸ್ತವಸ್ತುವೂ, ಈಶಾವಾಸ್ಯಂ = ಈಶನ ಆವಾಸಕ್ಕೆ ಅರ್ಹವಾದದ್ದು ಮತ್ತು ಜಗತ್ಯಾಂ= ಪ್ರಕೃತಿಯಲ್ಲಿ ಈ ಎಲ್ಲಾ ವಸ್ತುವು ಆಶ್ರಯಿಸಿದೆ, ತೇನ= ಆ ಕಾರಣದಿಂದ, ತೇನ= ಆ ಈಶ್ವರನಿಂದ, ತ್ಯಕ್ತೇನ= ಕೊಡಲ್ಪಟ್ಟ ವಿತ್ತದಿಂದ, ಭುಂಜೀಥಾಃ= ಭೋಗವನ್ನು ಮಾಡು, ಕಸ್ಯಸ್ವಿತ್ = ಯಾವ ರಾಜಾದಿಗಳಿಂದಲೂ, ಧನಂ ಮಾ ಗೃಧಃ = ಧನವನ್ನು ಅಪೇಕ್ಷಿಸಬೇಡ.

೧. ಈ ಜಗತ್ತು ಸ್ವತಃ ಪ್ರವರ್ತಿಸಲು ಅಸಮರ್ಥ ಈ ಕಾರಣದಿಂದ ಅದು ಈಶನ ಆವಾಸವನ್ನು ಅಪೇಕ್ಷಿಸುತ್ತದೆ ಅದು ಪ್ರಕೃತಿಯನ್ನು ಆಶ್ರಯಿಸಿ ಇದೆ ಆ ಪ್ರಕೃತಿಯೂ ಈಶ್ವರನ ಅಧೀನವಾಗಿ ಇದೆ. ಸರ್ವವೂ ಈಶ್ವರನ ಅಧೀನ ಪ್ರವೃತ್ತಿಯುಳ್ಳದ್ದು, ಆದುದರಿಂದ ಅವನವೇ ಆಗಿರುತ್ತವೆ.

ಈಶನಿಂದ ಅನ್ಯನಾದವನು ಅಸ್ವತಂತ್ರನಿರುವದರಿಂದ ಅವನಿಗೆ ದಾನ ಮಾಡು ವದರಲ್ಲಿ ಸ್ವಾತಂತ್ರ್ಯವಿಲ್ಲ. ಆದುದರಿಂದ ಈಶನಿಂದ ದತ್ತವಾದ ಧನದಿಂದಲೇ ಜೀವಿಸು. ಇತರ ಯಾವನನ್ನೂ ಯಾಚಿಸಬೇಡ

ಕುರ್ವನ್ನೇವೇಹವೆಂಬ ಎರಡನೇ ಮಂತ್ರದಿಂದ ವಿಷಯತೃಷ್ಣಾತ್ಯಾಗದಂತೆ ಸ್ವೋಚಿತ ಕರ್ಮಾನುಷ್ಠಾನವೂ ಜ್ಞಾನವನ್ನು ಅಪೇಕ್ಷಿಸುವವನಿಗೆ ಆವಶ್ಯಕ ವೆಂದು ವೇದಋಷಿ ಹೇಳುತ್ತಾರೆ

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗ್ಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ ೨ ॥**

ಶತಂ ಸಮಾಃ=ನೂರು ವರ್ಷಗಳನ್ನು, ಇಹ= ಈ ಮಾನುಷ ಜನ್ಮದಲ್ಲಿ, ಜಿಜೀವಿಷೇತ್ = ಎದುವರೆಗೆ ಜೀವಿಸಬೇಕೆಂದು ಅಪೇಕ್ಷೆ ಇದೆಯೋ ಅದುವರೆಗೆ, ಕರ್ಮಾಣಿ = ಸ್ವವರ್ಣಾಶ್ರಮೋಚಿತ ಕರ್ಮಗಳನ್ನು, ಕುರ್ವನ್ನೇವ = ಮಾಡಲೇ ಬೇಕು, ಏವಂ ತ್ವಯಿ ನರೇ=ಈ ಪ್ರಕಾರ ಕರ್ಮಗಳನ್ನು ಮಾಡುವ ಮನುಷ್ಯನಲ್ಲಿ ಕರ್ಮ = ಪಾಪವು, ನ ಲಿಪ್ಯತೇ = ಅಂಟುವದಿಲ್ಲ, ಇತಃ ಅನ್ಯಥಾ = ಕರ್ಮ ಮಾಡದೇ ಇರಲು, ಕರ್ಮ=ಪಾಪವು, ನ ಲಿಪ್ಯತೇ ಇತಿ ನಾಸ್ತಿ=ಅಂಟುವದಿಲ್ಲ ಎಂಬುವದಿಲ್ಲ

೨. ವರ್ಣಾಶ್ರಮೋಚಿತ ಕರ್ಮವನ್ನು ಜ್ಞಾನಭಕ್ತಿ ಹರಿಪ್ರೀತಿಗಳನ್ನುಳಿದು ಬೇರೆ ಯಾವುದನ್ನೂ ಇಚ್ಛಿಸದೆ ಭಗವತ್ಪೂಜಾರೂಪವಾಗಿ ಮಾಡುವವನಾಗಿಯೇ ಮರಣಾಂತವಾಗಿ ಜೀವಿಸಬೇಕು. ಹೀಗೆ ಕರ್ಮಮಾಡುವ ನಿನಗೆ ಪಾಪಲೇಪ ವಾಗುವದಿಲ್ಲ ಎಂದರೆ ನೀನು ಜ್ಞಾನಾಧಿಕಾರಿಯಾಗುವಿ. ಹೀಗೆ ಕರ್ಮವನ್ನು ಮಾಡದಿದ್ದರೆ ನಿನ್ನನ್ನು ಪೂರ್ವೋತ್ತರ ಪಾಪಗಳು ಬಾಧಿಸದೆ ಇರುವದಿಲ್ಲ. ಆದ್ದರಿಂದ ಅಂಥಾ ನೀನು ಜ್ಞಾನಾಧಿಕಾರಿಯಾಗುವದಿಲ್ಲ ಕರ್ಮ ಮಾಡದ ನೀನು ಜ್ಞಾನಿ ಎಂದರೂ ನಿನಗೆ ಕರ್ಮಲೇಪ ತಪ್ಪಿದ್ದಲ್ಲ ಮೋಕ್ಷದಲ್ಲಿ ಆನಂದ ಹ್ರಾಸರೂಪ ಕರ್ಮಲೇಪವು ಕರ್ಮ ಮಾಡದ ಜ್ಞಾನಿಗೆ ಪ್ರಾಪ್ತವಾಗುವದು

ವಿಷಯತೃಷ್ಣಾನಿವೃತ್ತಿ ಮತ್ತು ಸ್ವೋಚಿತಕರ್ಮಾನುಷ್ಠಾನಗಳಿಂದ ಸಂಪಾದಿಸಿದಂತಹ ಅಧಿಕಾರವುಳ್ಳವನನ್ನು ಕುರಿತು ಪರಮಾತ್ಮನ ತತ್ವವನ್ನು

ತಿಳಿಯಬೇಕೆಂಬ ಅಪೇಕ್ಷೆಯನ್ನು ಹುಟ್ಟಿಸುವದಕ್ಕೋಸ್ಕರ ವಿಪರೀತ ಜ್ಞಾನ ಉಳ್ಳವನ ನಿಂದೆಯನ್ನು ಅಸುರ್ಯಾ ಎಂಬ ಮಂತ್ರದಿಂದ ಮಾಡಲು ಆರಂಭಿಸುತ್ತಾರೆ:

**ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ ।**
**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ**
**॥ ೩ ॥**

ಅಸುರ್ಯಾ = ಅಸುರಪ್ರಾಪ್ಯವಾದ ಮಹಾದುಃಖವಿರುವ, ಅಂಧೇನ= ನಿಬಿಡವಾದ, ತಮಸಾ = ಕತ್ತಲೆಯಿಂದ, ಆವೃತಾಃ = ಆವರಿಸಲ್ಪಟ್ಟ, ತೇ= ಪ್ರಸಿದ್ಧಗಳಾದ, ಯೇ = ಯಾವ, ಲೋಕಾಃ=ಲೋಕಗಳೋ, ತಾನ್=ಆ ಲೋಕ ಗಳನ್ನು, ಪ್ರೇತ್ಯ = ಮರಣಾನಂತರ, ಆತ್ಮಹನಃ=ಪರಮಾತ್ಮನನ್ನು ಯಥಾರ್ಥ ವಾಗಿ ತಿಳಿಯದೆ ವಿಪರೀತವಾಗಿ ತಿಳಿದವರು, ಯೇ ಕೇ ಚ ವರ್ತಂತೇ=ಯಾರು ಕೆಲವರು ಇದ್ದಾರೊ, ತೇ ಸರ್ವೇಽಪಿ = ಅವರೆಲ್ಲರೂ, ಅಭಿಗಚ್ಛಂತಿ= ಹೊಂದು ತ್ತಾರೆ, ನಾಮ = ಇದು ನಿಶ್ಚಿತವಾದದ್ದು.

೩ ಯಾರು ಪರಮಾತ್ಮನನ್ನು ಯಥಾರ್ಥವಾಗಿ ತಿಳಿಯಲಿಲ್ಲವೋ ಅವ ರೆಲ್ಲರೂ ನಿಬಿಡವಾದ ಅಂಧಕಾರದಿಂದ ಕೂಡಿದ ಮಹಾ ದುಃಖಮಯವಾದ ಲೋಕಗಳನ್ನು ಮರಣಾನಂತರ ನಿಶ್ಚಯವಾಗಿ ಹೊಂದುತ್ತಾರೆ

ಅನೇಜತ್ ಇತ್ಯಾದಿ ಎರಡು ಮಂತ್ರಗಳಿಂದ ಈಗ ಪರಮಾತ್ಮ ತತ್ತ್ವ ವನ್ನು ಉಪದೇಶಿಸುತ್ತಾರೆ

**ಅನೇಜದೇಕಂ ಮನಸೋ ಜವೀಯೋ**
**ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ।**
**ತದ್ಧಾವತೋಽನ್ಯಾನತ್ಯೇತಿ ತಿಷ್ಠ-**
**ತ್ತಸ್ಮಿನ್ ಅಪೋ ಮಾತರಿಶ್ವಾ ದಧಾತಿ ॥ ೪ ॥**

ತತ್ = ಆ ಪರಬ್ರಹ್ಮನು, ಅನೇಜತ್ = ನಿರ್ಭಯನು, ಏಕಂ = ಪ್ರಧಾ ನನು, ಮನಸೋ ಜವೀಯಃ=ಮನಸ್ಸಿಗಿಂತಲೂ ಅತಿ ವೇಗವುಳ್ಳವನು, ಏನತ್=

ಈ ಪರಮಾತ್ಮಸ್ವರೂಪವನ್ನು, ದೇವಾಃ = ದೇವತೆಗಳು, ನಾಪ್ನುವನ್ = ಸಂಪೂರ್ಣವಾಗಿ ತಿಳಿಯಲಿಲ್ಲ, ಬ್ರಹ್ಮ ತು = ಬ್ರಹ್ಮನಾದರೂ, ಪೂರ್ವಂ=ಅನಾದಿ ಕಾಲದಿಂದ, ಅರ್ಷತ್= ತಿಳಿದಿರುವನು, ತತ್ ಆ ಬ್ರಹ್ಮನು, ತಿಷ್ಠತ್ = ಇರುವಲ್ಲಿಯೇ ಇದ್ದು, ಧಾವತಃ = ಓಡುವ, ಅನ್ಯಾನ್ = ಇತರರನ್ನು, ಅತ್ಯೇತಿ = ಮೀರಿರುವನು, ತಸ್ಮಿನ್ = ಆ ಪರಮಾತ್ಮನಲ್ಲಿ, ಮಾತರಿಶ್ವಾ = ಮುಖ್ಯವಾಯು, ಅಪಃ = ಕರ್ಮಗಳನ್ನು, ದಧಾತಿ=ಸಮರ್ಪಿಸುವನು.

೪. ಅಚಿಂತ್ಯ ಶಕ್ತಿ ಉಳ್ಳವನು ಹಾಗೂ ಸರ್ವವ್ಯಾಪಿಯಾಗಿದ್ದ ಕಾರಣ ಇರುವಲ್ಲಿಯೇ ಇದ್ದು ಪರಮಾತ್ಮನು ಓಡುವ ಇತರರನ್ನು ಮೀರಿದ್ದಾನೆ ಮುಖ್ಯ ವಾಯುದೇವರು ತಮ್ಮ ಪ್ರೇರಣೆಯಿಂದ ಎಲ್ಲಾ ಪ್ರಾಣಿಗಳಿಂದ ಮಾಡಿಸಿದ ಎಲ್ಲಾ ಪುಣ್ಯ ಕರ್ಮಗಳನ್ನು ಶ್ರೀ ಹರಿಯಲ್ಲಿ ಸಮರ್ಪಿಸುವರು

**ತದೇಜತಿ ತನ್ನೇಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯ ಬಾಹ್ಯತಃ ॥ ೫ ॥**

ತತ್=ಆ ಪರಮಾತ್ಮನ ದೆಸೆಯಿಂದ, ಜಗತ್=ಪ್ರಪಂಚವು, ಏಜತಿ=ಹೆದರಿಕೊಂಡಿದೆ, ತತ್= ಆ ಪರಬ್ರಹ್ಮನು, ನೇಜತಿ = ಹೆದರುವದಿಲ್ಲ, ತತ್ = ಅವನು, ದೂರೇ=ದೂರದೇಶದಲ್ಲಿದ್ದಾನೆ, ತದು=ಅವನೇ, ಅಂತಿಕೇ=ಸಮೀಪದಲ್ಲಿಯೂ ಇದ್ದಾನೆ, ತತ್=ಅವನು, ಅಸ್ಯ=ಈ ಲೋಕದ, ಅಂತಃ=ಒಳಗೆ ಇದ್ದಾನೆ, ತದು=ಅವನೇ, ಅಸ್ಯ=ಪ್ರಮಿತವಾದ, ಸರ್ವಸ್ಯ=ಎಲ್ಲಾ ಪ್ರಪಂಚದ, ಬಾಹ್ಯತಃ= ಹೊರಗೂ ಇದ್ದಾನೆ

೫. ಸಮಸ್ತ ಪ್ರಪಂಚವು ಪರಮಾತ್ಮನ ಅಧೀನವಾದ್ದರಿಂದ ಅವನಿಗೆ ಭಯಪಡುತ್ತದೆ. ಅವನು ಸ್ವತಂತ್ರನಾದುದರಿಂದ ಯಾರಿಗೂ ಹೆದರುವದಿಲ್ಲ. ಸರ್ವ ದೇಶದಲ್ಲಿಯೂ ವ್ಯಾಪಿಸಿಕೊಂಡಿರುವದರಿಂದ ಅವನು ದೂರದಲ್ಲಿಯೂ ಸಮೀಪದಲ್ಲಿಯೂ ಸರ್ವ ಪ್ರಪಂಚದ ಒಳಗೂ ಹೊರಗೂ ಇದ್ದಾನೆ.

'ತದ್ದೂರೇ' ಇತ್ಯಾದಿ ಮಂತ್ರದಲ್ಲಿ ಮಣಿಗಳ ಒಳಗೆ ಇರುವ ಸೂತ್ರವು ಮಣಿಗಳಿಗೆ ಆಶ್ರಯವಾಗಿರುವಂತೆ ಸಮಸ್ತ ಭೂತಗಳ ಒಳಗೆ ಇರುವ ಪರಮಾತ್ಮನು ಆ ಭೂತಗಳಿಗೆ ಆಧಾರನಾಗಿ ಸರ್ವತ್ರ ವ್ಯಾಪ್ತನಾಗಿ

ಇದ್ದಾನೆಂದು ಹೇಳಲ್ಪಟ್ಟಿತು ಉತ್ತರ ಮಂತ್ರದಲ್ಲಿ ಈ ಜ್ಞಾನಕ್ಕೆ ಫಲವನು ಹೇಳುತ್ತಾನೆ

**ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥ ೬॥**

ಸರ್ವಾಣಿ = ಚೇತನಾಚೇತನಾತ್ಮಕವಾದ, ಭೂತಾನಿ = ವಸ್ತುಗಳು, ಆತ್ಮನ್ಯೇವ=ಪರಮಾತ್ಮನನ್ನು ಆಶ್ರಯಿಸಿ, ಸಂತೀತಿ=ಇವೆ ಎಂದು, ಚ=ಮತ್ತು, ಸರ್ವಭೂತೇಷು=ಸಮಸ್ತ ಭೂತಗಳಲ್ಲಿ, ಸ್ಥಿತಂ=ನಿಯಾಮಕನಾಗಿ ಇರತಕ್ಕ ಶ್ರೀ ಹರಿಯನ್ನು, ಅನು=ನಿಃಸಂದೇಹವಾಗಿ, ಯಸ್ತು=ಯಾವನು, ಪಶ್ಯತಿ=ತಿಳಿಯುತ್ತಾನೋ, ಸಃ=ಅವನು, ತತಃ=ಆ ಜ್ಞಾನದ ಪ್ರಭಾವದಿಂದ, ಆತ್ಮಾನಂ= ತನ್ನನ್ನು, ನ ವಿಜುಗುಪ್ಸತೇ=ರಕ್ಷಿಸಿಕೊಳ್ಳುವದಕ್ಕೋಸ್ಕರ ಇಚ್ಛಿಸುವದಿಲ್ಲ.

೬ ಪರಮಾತ್ಮನು ಸರ್ವರಿಗೂ ರಕ್ಷಕನಾಗಿದ್ದಾನೆಂದು ತಿಳಿದಿರುವ ಜ್ಞಾನಿಯು ಭಯರಹಿತನಾಗಿದ್ದು ತನ್ನ ರಕ್ಷಣೆಯನ್ನು ತಾನು ಮಾಡಿಕೊಳ್ಳುವದಕ್ಕೆ ಬಯಸುವದಿಲ್ಲ

ಇದೇ ಅರ್ಥವನ್ನು ಉತ್ತರ ಮಂತ್ರದಿಂದ ವಿವರಿಸಿ ಹೇಳುತ್ತಾರೆ:

**ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂತ್ ವಿಜಾನತಃ।**
**ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ ॥ ೭ ॥**

ಯಸ್ಮಿನ್=ಯಾವ ಪರಮಾತ್ಮನಲ್ಲಿ, ಸರ್ವಾಣಿ ಭೂತಾನಿ=ಸಮಸ್ತ ಭೂತಗಳು ಆಶ್ರಯವನ್ನು ಹೊಂದಿ ಇರುವುವೊ, ಸಃ ಆತ್ಮೈವ=ಆ ಪರಮಾತ್ಮನೇ, ಅಭೂತ್=ಅನಾದಿ ಕಾಲದಿಂದಲೂ ಸಮಸ್ತ ಭೂತಗಳಲ್ಲಿ ಇರುವನು ಏವಂ ವಿಜಾನತಃ=ಸರ್ವಭೂತಗಳಲ್ಲಿ ಸರ್ವಾಧಾರನಾಗಿ ಪರಮಾತ್ಮನು ಇದ್ದಾನೆಂದು ತಿಳಿದವನಿಗೆ, ಚ=ಮತ್ತು, ಏಕತ್ವಂ=ಸರ್ವತ್ರ ಇರುವ ಹರಿಯು ಒಬ್ಬನೆಂದು, ಅನುಪಶ್ಯತಃ=ನಿಸ್ಸಂದೇಹವಾಗಿ ನೋಡತಕ್ಕವನಿಗೆ, ಕೋ ಮೋಹಃ ಶೋಕಃ=ಮೋಹವಾವುದು ? ಶೋಕವಾವುದು ?

ಪರಮಾತ್ಮನ ಜ್ಞಾನಮಾತ್ರದಿಂದ ಶೋಕ ಮೋಹಾಭಾವಗಳು ಏಕೆ ? ಎಂದು ಪ್ರಶ್ನಿಸಿದರೆ ಉತ್ತರ ಮಂತ್ರದಿಂದ ಉತ್ತರವನ್ನು ಹೇಳುತ್ತಾರೆ.

**ಸ ಪರ್ಯಗಾತ್ ಶುಕ್ರಮಕಾಯಮವ್ರಣ-**
**ಮಸ್ನಾವಿರಂ ಶುದ್ಧಮಪಾಪವಿದ್ಧಂ ।**
**ಕವಿರ್ಮನೀಷೀ ಪರಿಭೂಃ ಸ್ವಯಂಭೂ-**
**ರ್ಯಾಥಾತಥ್ಯತೋಽರ್ಥಾನ್ ವ್ಯದಧಾತ್**
**ಶಾಶ್ವತೀಭ್ಯಃ ಸಮಾಭ್ಯಃ ॥ ೮ ॥**

ಸಃ=ಆ ಜ್ಞಾನಿಯು, ಬ್ರಹ್ಮ=ಪರಮಾತ್ಮನನ್ನು, ಪರ್ಯಗಾತ್=ಹೊಂದಿದವನಾದನು, ಇಷ್ಟುಮಾತ್ರದಿಂದ ಹೇಗೆ ಶೋಕ ಮೋಹಾಭಾವವು ? ಎಂದರೆ ಉತ್ತರ ರೂಪವಾಗಿ ಆ ಪರಮಾತ್ಮನಿಗೆ ಕೆಲವು ವಿಶೇಷಣಗಳನ್ನು ಹೇಳುತ್ತಾರೆ ಶುಕ್ರಂ=ಶೋಕರಹಿತನಾದ, ಅಕಾಯಂ=ಲಿಂಗದೇಹರಹಿತನಾದ, ಅವ್ರಣಂ=ಪರಿಪೂರ್ಣನಾದ, ಅಸ್ನಾವಿರಂ=ಸ್ನಾವವೇ ಮೊದಲಾದ ಸಪ್ತಧಾತುಮಯ ಸ್ಥೂಲ ದೇಹರಹಿತನಾದ, ಶುದ್ಧಂ=ಪಾವಿತ್ರ್ಯಹೇತುವಾದ, ಅಪಾಪವಿದ್ಧಂ=ಪಾಪವಿಲ್ಲದ ಶ್ರೀಹರಿಯನ್ನು, ಪರ್ಯಗಾತ್ = ಜ್ಞಾನಿಯು ಹೊಂದಿದವನಾದನು ಶ್ರೀ ಹರಿಯು ಶೋಕಮೋಹಾದಿ ಸಕಲ ದೋಷರಹಿತನು. ಇವನ ಸಾರೂಪ್ಯವನ್ನು ಹೊಂದಿದ ಕಾರಣ, ಜ್ಞಾನಿಯು ಶೋಕಮೋಹಾದ್ಯಭಾವವುಳ್ಳವನಾಗುತ್ತಾನೆಂದು ಭಾವವು ಶ್ರೀ ಹರಿಯು ಸ್ಥೂಲ ಸೂಕ್ಷ್ಮ ದೇಹವಿಲ್ಲದವನಾದರೆ ಜಗತ್ಸೃಷ್ಟಿಕರ್ತನಾಗುವದು ಹೇಗೆ ? ಲೋಕದಲ್ಲಿ ದೇಹವುಳ್ಳವನೇ ಸ್ರಷ್ಟೃತ್ವವುಳ್ಳವನು ಎಂದು ಕಂಡಿದೆ ಎಂಬ ಶಂಕೆಯನ್ನು ಪರಿಹರಿಸುತ್ತಾರೆ. ಕವಿಃ=ಸರ್ವಜ್ಞನು, ಮನೀಷೀ=ಎಲ್ಲರ ಮನಸ್ಸಿಗೆ ಪ್ರೇರಕನು ಸರ್ವಜ್ಞನು ಶ್ರೀ ಹರಿ ಎಂದ ಮೇಲೆ ಅವನಿಗೆ ದೇಹ ಇದೆ ಎಂದು ಸಿದ್ಧವಾಯಿತು. ದೇಹವಿಲ್ಲದವರಿಗೆ ಲೋಕದಲ್ಲಿ ಜ್ಞಾನವು ಇಲ್ಲ ಆದರೆ ಆ ದೇಹವು ಪ್ರಾಕೃತವಲ್ಲ ಅಪ್ರಾಕೃತ ಜ್ಞಾನಾನಂದಾತ್ಮಕವಾದದ್ದು ಎಂದು ಅಭಿಪ್ರಾಯ ಪರಿಭೂಃ=ಎಲ್ಲವನ್ನೂ ತನ್ನ ವಶವನ್ನಾಗಿ ಮಾಡಿದ್ದಾನೆ. ಸ್ವಯಂಭೂಃ=ಇನ್ನೊಬ್ಬರನ್ನು ಆಶ್ರಯಿಸದೆ ಸ್ವತಂತ್ರನಾಗಿದ್ದಾನೆ ಶಾಶ್ವತೀಭ್ಯಃ ಸಮಾಭ್ಯಃ=ಅನಾದ್ಯನಂತ ಸಂವತ್ಸರಗಳಲ್ಲಿ, ಯಾಥಾತಥ್ಯತಃ=ಯಥಾರ್ಥವಾಗಿ, ಅರ್ಥಾನ್=ವಸ್ತುಗಳನ್ನು, ವ್ಯದಧಾತ್=ನಿರ್ಮಾಣ ಮಾಡಿದನು

೮. ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿಯು ಕಲ್ಪಿತವಾದಂತೆ ಬ್ರಹ್ಮನಲ್ಲಿ ಈ ಜಗತ್ತು ಕಲ್ಪಿತವಾಗಿದೆ. ಈ ಜಗತ್ತು ಮಿಥ್ಯೆಯು, ಇದಕ್ಕೆ ಸೃಷ್ಟಿಯೇ ಇಲ್ಲ, ಆದುದರಿಂದ ಶ್ರೀ ಹರಿಗೆ ದೇಹವನ್ನು ಅಂಗೀಕರಿಸುವದು ಅನಾವಶ್ಯಕ ಎಂಬ ಶಂಕೆಯನ್ನು ಈ ಮಂತ್ರದಲ್ಲಿ ಯಾಥಾತಥ್ಯತಃ ಎಂಬ ಪದದಿಂದ ಶ್ರೀ ಹರಿಯು ಯಥಾರ್ಥವಾಗಿ ಸೃಷ್ಟಿಮಾಡಿದನೆಂದು ಹೇಳಿ ಪರಿಹರಿಸಿದ್ದಾರೆ. ಶ್ರೀಹರಿಯು ಸದಾ ದೇಹಹೀನನಾದರೂ ಸೃಷ್ಟಿ ಸಮಯದಲ್ಲಿ ಮಾತ್ರ ಸೃಷ್ಟಿಗೋಸ್ಕರ ಪ್ರಾಕೃತ ದೇಹವನ್ನು ಸ್ವೀಕರಿಸುತ್ತಾನೆಂಬ ಸಂಶಯವನ್ನು ಈ ಮಂತ್ರದಿಂದ ಶಾಶ್ವತೀಭ್ಯಃ ಸಮಾಭ್ಯಃ ಎಂದು ಶ್ರೀ ಹರಿಯು ಅನಾದ್ಯನಂತ ಕಾಲದಲ್ಲಿ ಸೃಷ್ಟ್ಯಾದಿಗಳನ್ನು ಮಾಡುತ್ತಲೇ ಇದ್ದಾನೆಂದು ಹೇಳಿದ್ದರಿಂದ ಸೃಷ್ಟಿಗೋಸ್ಕರ ಸದಾ ಅಪ್ರಾಕೃತ ನಿತ್ಯ ದೇಹವುಳ್ಳವನೆಂದು ತಿಳಿಸಿ ಪರಿಹರಿಸಿದ್ದಾರೆ. ವಿಜಾನತಃ ಅನುಪಶ್ಯತಃ ಎಂಬ ಹಿಂದಿನ ಮಂತ್ರಭಾಗಗಳಲ್ಲಿ ಯಥಾರ್ಥವಾದ ಪರಮಾತ್ಮಜ್ಞಾನವು ಮುಕ್ತಿಹೇತು ಎಂದು ಉಕ್ತವಾಗಿವೆ

ಆ ಜ್ಞಾನವು ಮಿಥ್ಯಾಜ್ಞಾನನಿಂದೆಯಿಂದೊಡಗೂಡಿಯೇ ಮುಖ್ಯ ಹೇತು, ಅದೊಂದೇ ಅಲ್ಲ ಎಂದು ಮುಂದಿನ ಮೂರು ಮಂತ್ರಗಳಿಂದ ಹೇಳುತ್ತಾರೆ

**ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ**
**ವಿದ್ಯಾಯಾಗ್ಂ ರತಾಃ ॥ ೯ ॥**

ಯೇ=ಯಾರು, ಅವಿದ್ಯಾಂ=ಮಿಥ್ಯಾರೂಪವನ್ನು, ಉಪಾಸತೇ=ಧ್ಯಾನ ಮಾಡುತ್ತಾರೋ, ತೇ=ಅವರು, ಅಂಧಂತಮಃ=ನಿತ್ಯ ದುಃಖವುಳ್ಳ ಲೋಕವನ್ನು, ಪ್ರವಿಶಂತಿ=ಪ್ರವೇಶಿಸುತ್ತಾರೆ, ಯೇ=ಯಾರು, ವಿದ್ಯಾಯಾಂ ಉ=ತತ್ತ್ವಜ್ಞಾನದಲ್ಲಿಯೇ, ರತಾಃ=ಆಸಕ್ತರೋ, ಅಯಥಾರ್ಥ ಜ್ಞಾನವನ್ನು ನಿಂದಿಸದೆ ಇರುವರೋ, ತೇ=ಅವರು, ತತಃ=ಅಯಥಾರ್ಥಜ್ಞಾನಿಗಳಿಂದ ಹೊಂದಲ್ಪಡತಕ್ಕ ತಮಸ್ಸಿಗಿಂತಲೂ, ಭೂಯಃ=ಹೆಚ್ಚಾದಂತಹ, ತಮಃ=ದುಃಖವನ್ನು, ಇವ=ನಿಸ್ಸಂದೇಹವಾಗಿ, ಪ್ರವಿಶಂತಿ=ಹೊಂದುತ್ತಾರೆ

ತಿಳಿಯದೆ ತಪ್ಪು ಮಾಡುವವರಿಗಿಂತಲೂ ತಿಳಿದು ತಪ್ಪು ಮಾಡುವವರು ಹೆಚ್ಚಿನ ಅಪರಾಧಿಗಳು. " ಈ ಊರಲ್ಲಿ ಪ್ಲೇಗು ಇದೆ, ಯಾರೂ ಹೋಗ

ಕೂಡದು. ತಿಳಿಯದೆ ಹೋಗುವವರನ್ನು ತಡೆಯತಕ್ಕದ್ದು" ಎಂದು ಸರಕಾರಿ ಬೋರ್ಡು ಇದೆ ಎನ್ನೋಣ ಇದನ್ನು ತಿಳಿಯದೆ ಹೋಗುವವನು ಅಪರಾಧಿಯು ನಿಜ, ಆದರೆ ಅವನು ಹೋಗುವುದನ್ನು ನೋಡಿಯೂ ತಿಳಿದವನು ತಡೆಯದಿದ್ದರೆ ಇನ್ನೂ ಹೆಚ್ಚಿನ ಅಪರಾಧಿಯಾಗುವನು. ಅದರಂತೆ ಮಿಥ್ಯಾಜ್ಞಾನ ನಿಂದೆಯನ್ನು ವಿದ್ಯಾವಂತರು ಮಾಡದೆ ಇದ್ದರೆ ಹೆಚ್ಚಿನ ಅಪರಾಧಕ್ಕೆ ಗುರಿಯಾಗುತ್ತಾರೆ.

**ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ ೧೦ ॥**

ವಿದ್ಯಯಾ=ತತ್ತ್ವಜ್ಞಾನದಿಂದ, ಅನ್ಯದೇವ = ಮೋಕ್ಷದ ಒಂದು ಭಾಗವು, ಪ್ರಾಪ್ಯಂ=ಹೊಂದಲ್ಪಡುವದೆಂದು, ವೃದ್ಧಾಃ=ದೊಡ್ಡವರು, ಆಹುಃ=ಹೇಳುವರು, ಅವಿದ್ಯಯಾ = ಅನ್ಯಥಾಜ್ಞಾನನಿಂದೆಯಿಂದ, ಅನ್ಯದೇವ=ಮೋಕ್ಷದ ಇನ್ನೊಂದು ಭಾಗವು, ಪ್ರಾಪ್ಯಂ=ಹೊಂದಲ್ಪಡುವದೆಂದು, ವೃದ್ಧಾಃ=ದೊಡ್ಡವರು, ಆಹುಃ=ಹೇಳುವರು, ಇತಿ = ಈ ಪ್ರಕಾರ, ಧೀರಾಣಾಂ=ಜ್ಞಾನಿಗಳಿಂದ, ಶುಶ್ರುಮ= ಕೇಳಿರುತ್ತೇವೆ, ಯೇ=ಯಾವ ಜ್ಞಾನಿಗಳು, ನಃ=ನಮಗೆ, ಮೋಕ್ಷಸಾಧನಂ= ಮೋಕ್ಷಸಾಧನವನ್ನು, ವಿಚಚಕ್ಷಿರೇ=ಉಪದೇಶ ಮಾಡಿದರೋ ( ಆ ಧೀರರಿಂದ ಕೇಳಿರುತ್ತೇವೆ)

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥ ೧೧ ॥**

ವಿದ್ಯಾಂ ಚ=ವಿಷ್ಣುವಿನ ಯಥಾರ್ಥ ಜ್ಞಾನವನ್ನು, ಅವಿದ್ಯಾಂ ಚ=ಮಿಥ್ಯಾಜ್ಞಾನನಿಂದನವನ್ನೂ ಪರಸ್ಪರ ಸಾಪೇಕ್ಷವಾಗಿ, ಸಹ=ಒಂದೇ ಮೋಕ್ಷವೆಂಬ ಪುರುಷಾರ್ಥಕ್ಕೆ ಸಾಧನ ಎಂದು, ತದುಭಯಂ=ಆ ಎರಡನ್ನು, ಯಃ=ಯಾವನು, ವೇದ=ತಿಳಿಯುತ್ತಾನೆಯೋ, ಸಃ=ಅವನು, ಅವಿದ್ಯಯಾ=ಅನ್ಯಥಾಜ್ಞಾನನಿಂದೆಯಿಂದ, ಮೃತ್ಯುಂ=ದುಃಖಾಜ್ಞಾನ ಮುಂತಾದ ಅನಿಷ್ಟವನ್ನು, ತೀರ್ತ್ವಾ=ದಾಟಿ, ವಿದ್ಯಯಾ=ವಿಷ್ಣುವನ್ನು ಯಥಾವತ್ತಾಗಿ ತಿಳಿಯುವದರಿಂದ, ಅಮೃತಂ=ಆನಂ

ಖಾನುಭವಸ್ವರೂಪವಾದ ಮೋಕ್ಷದ ಇನ್ನೊಂದು ಭಾಗವನ್ನು, ಅಶ್ನುತೇ= ಹೊಂದುವನು.

೧೧. ನಾವು ನಮ್ಮ ಕರ್ಮಕ್ಕೆ ಅನುಸಾರವಾಗಿ ಫಲವನ್ನು ಹೊಂದುತ್ತೇವೆ. ಇನ್ನೊಬ್ಬರಿಗೆ ದುಃಖವನ್ನುಂಟುಮಾಡಿದರೆ ನಾವು ದುಃಖವನ್ನು ಹೊಂದುತ್ತೇವೆ ಇನ್ನೊಬ್ಬರಿಗೆ ಸುಖವಾಗುವಂತೆ ಮಾಡಿದರೆ ನಾವು ಸುಖಿಗಳಾಗುತ್ತೇವೆ ಪ್ರಕೃತದಲ್ಲಿ ವಿಪರೀತಜ್ಞಾನವು ದುಃಖಹೇತುವಾಗಿದೆ ಅಂಥಾ ವಿಪರೀತ ಜ್ಞಾನವನ್ನು ದೂಷಿಸಿ ಹೋಗಲಾಡಿಸಿದರೆ ದುಃಖನಿವಾರಣಾರೂಪ ಪರೋಪಕಾರ ಮಾಡಿದಹಾಗಾಯಿತು ಆದುದರಿಂದ ಅದಕ್ಕೆ ಅನುಸಾರವಾಗಿ ಮೋಕ್ಷದಲ್ಲಿ ಇವನು ಅನಿಷ್ಟನಿವೃತ್ತಿಯನ್ನು ಹೊಂದುತ್ತಾನೆ. ಆದುವರಿಂದ ಅನಿಷ್ಟನಿವೃತ್ತಿಎಂಬ ಮೋಕ್ಷದ ಒಂದು ಅಂಶವನ್ನು ಹೊಂದಬೇಕಾದರೆ ಮಿಥ್ಯಾ ಜ್ಞಾನವನ್ನು ನಿವಾರಣೆ ಮಾಡಬೇಕು ಎಂದು ಭಾವ

ಅಂಧಂ ತಮಃ ಪ್ರವಿಶಂತಿ ಯೇಽಸಂಭೂತಿಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ
ಸಂಭೂತ್ಯಾಗ್ಂ ರತಾಃ ॥ ೧೨ ॥

ಯೇ=ಯಾರು, ಅಸಂಭೂತಿಂ=ಪರಮಾತ್ಮನು ಜಗತ್‌ಸೃಷ್ಟಿಕರ್ತನಲ್ಲ ಎಂದು, ಉಪಾಸತೇ=ಉಪಾಸನೆ ಮಾಡುತ್ತಾರೊ,ತೇ=ಅವರು, ಅಂಧಂತಮಃ= ನಿತ್ಯದುಃಖವುಳ್ಳ ಲೋಕವನ್ನು, ಪ್ರವಿಶಂತಿ=ಹೊಂದುತ್ತಾರೆ ತತಃ=ಅವರಿಗಿಂತಲೂ, ಭೂಯಃ=ಅಧಿಕವಾದ, ತಮಃ=ದುಃಖವನ್ನು, ಯೇ=ಯಾರು ಸಂಭೂತ್ಯಾಂ ಉ=ಸೃಷ್ಟಿಕರ್ತೃತ್ವದಲ್ಲಿಯೇ, ರತಾಃ=ಆಸಕ್ತರೋ(ಸಂಹಾರಕರ್ತೃತ್ವವು ಇಲ್ಲ ಎಂದು ಉಪಾಸನೆ ಮಾಡುತ್ತಾರೊ),ತೇ=ಅವರು, ಇವ=ನಿಸ್ಸಂದೇಹವಾಗಿ, ಪ್ರವಿಶಂತಿ=ಹೊಂದುತ್ತಾರೆ.

೧೨. ಸೃಷ್ಟಿಕರ್ತೃತ್ವವನ್ನು ಬೋಧಿಸುವ ವೇದಾದಿ ಶಾಸ್ತ್ರದ ಜ್ಞಾನವಿಲ್ಲದ ಕಾರಣ ಕೆಲವರು ಸೃಷ್ಟಿಕರ್ತೃತ್ವ ಇಲ್ಲ ಎಂದು ತಿಳಿಯುತ್ತಾರೆ. ಕೆಲವರು ಸೃಷ್ಟಿಕರ್ತೃತ್ವವನ್ನು ವೇದಾದಿ ಶಾಸ್ತ್ರದಿಂದ ತಿಳಿದರೂ ವೇದೋಕ್ತವಾದ ಸಂಹಾರಕರ್ತೃತ್ವವನ್ನು ಒಪ್ಪುವದಿಲ್ಲ. ಅವರು ಆ ವೇದಭಾಗಕ್ಕೆ

ಅಪ್ರಾಮಾಣ್ಯವನ್ನು ತಿಳಿದಂತಾಯಿತು. ಶಾಸ್ತ್ರದ ಪರಿಜ್ಞಾನ ಇಲ್ಲದೆ ಅವರು ಸೃಷ್ಟಿಕರ್ತೃತ್ವವನ್ನು ತಿಳಿಯಲು ಸಾಧ್ಯ ಇಲ್ಲ ಅದೇ ಶಾಸ್ತ್ರದಲ್ಲಿ ಸಂಹಾರ ಕರ್ತೃತ್ವವನ್ನೂ ಹೇಳುತ್ತದೆ. ಆದುದರಿಂದ ಅವರು ಶಾಸ್ತ್ರ ತಿಳಿದರೂ ವಿಪರೀತ ಜ್ಞಾನಿಗಳಾದ್ದರಿಂದ ಹೆಚ್ಚಿನ ದೋಷಿಗಳಾಗುತ್ತಾರೆಂದು ಅಭಿಪ್ರಾಯ

**ಅನ್ಯದೇವಾಹುಃ ಸಂಭವಾತ್ ಅನ್ಯದಾಹುರಸಂಭವಾತ್ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ ವಿಚಚಕ್ಷಿರೇ ॥ ೧೩ ॥**

ಸಂಭವಾತ್=ಪರಮಾತ್ಮನ ಸರ್ವ ಕರ್ತೃತ್ವವನ್ನು ತಿಳಿಯೋಣದರಿಂದ, ಅನ್ಯದೇವ = ಮೋಕ್ಷದ ಒಂದು ಭಾಗವನ್ನೇ, ಪ್ರಾಪ್ಯಂ=ಹೊಂದಲಿಕ್ಕೆ ಯೋಗ್ಯ ವನ್ನಾಗಿ, ವೃದ್ಧಾಃ=ಜ್ಞಾನಿಗಳು, ಆಹುಃ=ಹೇಳುವರು, ಅಸಂಭವಾತ್=ಸರ್ವ ಸಂಹಾರಕರ್ತೃತ್ವವನ್ನು ತಿಳಿಯುವದರಿಂದ, ಅನ್ಯತ್=ಮೋಕ್ಷದ ಇನ್ನೊಂದು ಭಾಗವನ್ನು, ಪ್ರಾಪ್ಯಂ=ಹೊಂದಲಿಕ್ಕೆ ಯೋಗ್ಯವನ್ನಾಗಿ, ವೃದ್ಧಾಃ=ಜ್ಞಾನಿಗಳು, ಆಹುಃ=ಹೇಳುವರು, ಇತಿ=ಈ ಪ್ರಕಾರವಾಗಿ, ಧೀರಾಣಾಂ=ಜ್ಞಾನಿಗಳ ದೆಸೆ ಯಿಂದ, ಶುಶ್ರುಮ=ಕೇಳಿರುತ್ತೇವೆ, ಯೇ=ಯಾರು, ನಃ=ನಮಗೆ, ತತ್=ಆ ತತ್ತ್ವವನ್ನು, ವಿಚಚಕ್ಷಿರೇ=ವ್ಯಾಖ್ಯಾನ ಮಾಡುತ್ತಾರೆಯೋ (ಆ ಧೀರರಿಂದ ಕೇಳಿರುತ್ತೇವೆ.)

**ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಗ್ಂ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ**
**॥ ೧೪ ॥**

ಸಂಭೂತಿಂ = ಸೃಷ್ಟಿಕರ್ತೃತ್ವವನ್ನು, ವಿನಾಶಂ=ಸಂಹಾರ ಕರ್ತೃತ್ವ ವನ್ನು, ಯಃ=ಯಾವನು, ಸಹ=ಒಂದೇ ಪುರುಷಾರ್ಥಕ್ಕೆ ಹೇತುವೆಂದು, ವೇದ= ತಿಳಿಯುತ್ತಾನೆಯೋ, ಸಃ=ಅವನು, ವಿನಾಶೇನ=ಸಂಹಾರಕರ್ತೃತ್ವ ಜ್ಞಾನ ದಿಂದ,ಮೃತ್ಯುಂ=ಅನಿಷ್ಟನಿವೃತ್ತಿರೂಪ ಮೋಕ್ಷದ ಒಂದಂಶವನ್ನು, ಸಂಭೂತ್ಯಾ= ಸೃಷ್ಟಿಕರ್ತೃತ್ವ ಜ್ಞಾನದಿಂದ, ಅಮೃತಂ=ಆನಂದಾನುಭವರೂಪವಾದ ಮೋಕ್ಷದ ಮತ್ತೊಂದು ಭಾಗವನ್ನು, ಅಶ್ನುತೇ=ಹೊಂದುತ್ತಾನೆ

**೧೪.** 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂಬ ಶ್ರುತಿಯಲ್ಲಿ ಹೇಳಿದಂತೆ ಉಪಾಸನೆಗೆ ಸರಿಯಾದ ಫಲವನ್ನು ಪರಮಾತ್ಮನು ಕೊಡುತ್ತಾನೆ.

ಪರಮಾತ್ಮನು ಸೃಷ್ಟಿಕರ್ತನು ಎಂದು ಉಪಾಸನೆ ಮಾಡಿದರೆ ಜ್ಞಾನಿಗೆ ಮೋಕ್ಷದಲ್ಲಿ ಸುಖದ ಸೃಷ್ಟಿಯನ್ನು ಅಂದರೆ ಸ್ವರೂಪಸುಖದ ಅಭಿವ್ಯಕ್ತಿಯನ್ನು ಶ್ರೀಹರಿಯು ಮಾಡುತ್ತಾನೆ ಪರಮಾತ್ಮನು ಸಂಹಾರಕರ್ತಾ ಎಂದು ಉಪಾಸನೆ ಮಾಡಿದರೆ ಜ್ಞಾನಿಯ ದೇಹ ಕರ್ಮ ತನ್ನಿಮಿತ್ತಕ ದುಃಖಗಳನ್ನು ನಾಶಮಾಡುತ್ತಾನೆಂದು ಅಭಿಪ್ರಾಯವು

ಪೂರ್ವೋಕ್ತ ಪ್ರಕಾರವಾಗಿ ಆರಂಭದ ಎರಡು ಮಂತ್ರಗಳಿಂದ ಹೇಳಲ್ಪಟ್ಟ ವಿಷಯ—ತೃಷ್ಣಾನಿವೃತ್ತಿ ಮತ್ತು ವರ್ಣಾಶ್ರಮೋಚಿತ ನಿಷ್ಕಾಮ ಕರ್ಮಾನುಷ್ಠಾನರೂಪ ಅಧಿಕಾರ ಹೊಂದಿದವನನ್ನು ಕುರಿತು ಅನೇಜದೇಕಂ ಇತ್ಯಾದಿ ಮಂತ್ರದಿಂದ ಪರಮಾತ್ಮನ ಸ್ವರೂಪೋಪದೇಶ ಮಾಡಿ 'ಯಸ್ತು ಸರ್ವಾಣಿ' ಇತ್ಯಾದಿ ಮಂತ್ರಗಳಿಂದ ಆ ಪರಮಾತ್ಮನ ಸಾಕ್ಷಾತ್ಕಾರವು ಮೋಕ್ಷಹೇತು ಎಂದು ಹೇಳಲ್ಪಟ್ಟಿತು. ಆ ಸಾಕ್ಷಾತ್ಕಾರವು ಶಾಸ್ತ್ರದ ಶ್ರವಣ ಮನನ ಧ್ಯಾನಗಳಿಂದಲೇ ಆಗುವದಿಲ್ಲ. ಪರಮಾತ್ಮನ ಪ್ರಸಾದವೂ ಸಾಕ್ಷಾತ್ಕಾರಕ್ಕೆ ಮುಖ್ಯ ಸಾಧನವಾಗಿದೆ. ಆದುದರಿಂದ ಶ್ರವಣಾದಿಗಳನ್ನು ಮಾಡಿದವನು ಸಾಕ್ಷಾತ್ಕಾರಕ್ಕೋಸ್ಕರ ಪರಮಾತ್ಮನ ಪ್ರಾರ್ಥನೆಯನ್ನು ಮಾಡಬೇಕು ಎಂಬ ಅಭಿಪ್ರಾಯದಿಂದ ಉತ್ತರ ಮಂತ್ರಗಳಿಂದ ಪ್ರಾರ್ಥನೆ ಮಾಡುವ ಪ್ರಕಾರವನ್ನು ಹೇಳುತ್ತಾರೆ

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।**
**ತತ್ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ ॥೧೫॥**

ಹಿರಣ್ಮಯೇನ=ಬಂಗಾರದಂತೆ ಪ್ರಕಾಶಮಾನವಾದ, ಪಾತ್ರೇಣ=ಎಲ್ಲಾ ವಸ್ತುಗಳ ರಸಗಳನ್ನು ಹೀರುವ ಮತ್ತು ಜಗದ್ರಕ್ಷಕವಾದ ಸೂರ್ಯಮಂಡಲದಿಂದ, ಸತ್ಯಸ್ಯ=ಸದ್ಗುಣಪೂರ್ಣನಾದ, ತವ=ನಿನ್ನ, ಮುಖಂ=ಮುಖವೇ ಮೊದಲಾದ ರೂಪವು, ಅಪಿಹಿತಂ=ಆಚ್ಛಾದಿಸಲ್ಪಟ್ಟಿದೆ, ಹೇ ಪೂಷನ್=ಎಲೊ ಪೂರ್ಣನೇ, ತತ್=ಆ ರೂಪವನ್ನು, ತ್ವಂ=ನೀನು, ಸತ್ಯಧರ್ಮಾಯ=ಸತ್ಯನಾಮಕ ಪರಮಾತ್ಮನನ್ನು ಹೃದಯದಲ್ಲಿ ಧರಿಸಿದ(ನಿನ್ನನ್ನು ಧ್ಯಾನ ಮಾಡತಕ್ಕ) ಭಕ್ತನಾದ ನನಗೋಸ್ಕರ, ದೃಷ್ಟಯೇ=ದರ್ಶನಕ್ಕೋಸ್ಕರ, ಅಪಾವೃಣು=ಹೋಗಲ್ಪಟ್ಟ ಆವರಣವುಳ್ಳದ್ದನ್ನಾಗಿ ಮಾಡು.

ಪೂಷನ್ನೇಕರ್ಷೇ ಯಮ ಸೂರ್ಯ
ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ
ತೇಜೋ ಯತ್ತೇ ರೂಪಂ ಕಲ್ಯಾಣತಮಂ
ತತ್ತೇ ಪಶ್ಯಾಮಿ ॥ ೧೬ ॥

ಹೇ ಪೂಷನ್=ಪೂರ್ಣನೇ, ಏಕರ್ಷೇ=ಸರ್ವವಿಷಯಕವಾದ ಉತ್ತಮ ಜ್ಞಾನ ಇರುವ ನಿಮಿತ್ತದಿಂದ ಏಕರ್ಷಿ ಶಬ್ದವಾಚ್ಯನಾಗಿ ಏಕರ್ಷಿ ಎಂಬ ಮುನಿಯಲ್ಲಿದ್ದವನೇ, ಯಮ=ಸರ್ವನಿಯಾಮಕನಾದ್ದರಿಂದ ಯಮ ಶಬ್ದವಾಚ್ಯನಾಗಿ ಯಮನಲ್ಲಿರುವವನೇ, ಸೂರ್ಯ=ಜ್ಞಾನಿಗಳಿಂದ ಪ್ರಾಪ್ಯನಾದ್ದರಿಂದ ಸೂರ್ಯ ಶಬ್ದವಾಚ್ಯನಾಗಿ ಸೂರ್ಯನಲ್ಲಿ ಇರುವವನೇ, ಪ್ರಾಜಾಪತ್ಯ=ಚತುರ್ಮುಖನಿಂದ ಪ್ರಾಪ್ಯನಾದ್ದರಿಂದ ಪ್ರಾಜಾಪತ್ಯಶಬ್ದವಾಚ್ಯನಾಗಿರುವವನೇ, ರಶ್ಮೀನ್=ನನ್ನ ಸ್ವರೂಪ ಜ್ಞಾನಗಳನ್ನು, ವ್ಯೂಹ=ವಿಸ್ತಾರಮಾಡು, ತೇಜಃ=ಬಾಹ್ಯವಾದ ಮನೋವಿಕಾರವಾದ ಜ್ಞಾನವನ್ನು, ಸಮೂಹ = ವಿಸ್ತಾರ ಮಾಡು, ಯತ್=ಯಾವ, ಕಲ್ಯಾಣತಮಂ=ಅತ್ಯಂತ ಮಂಗಲಮಯವಾದ, ತೇ=ನಿನ್ನ, ರೂಪಂ=ರೂಪವೋ, ತತ್=ಅದನ್ನು, ತೇ=ನಿನ್ನ ಪ್ರಸಾದದಿಂದ, ಅಹಂ=ನಾನು, ಪಶ್ಯಾಮಿ=ನೋಡುತ್ತೇನೆ.

ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ ೧೭ ॥

ಯಃ=ಯಾವನು, ಅಸೌ=ಮುಖ್ಯಪ್ರಾಣಾದ್ಯನೇಕ ದೇವತೆಗಳ ಅಂತರ್ಯಾಮಿಯಾದ, ಪುರುಷಃ=ಪೂರ್ಣ ಷಡ್ಗುಣವುಳ್ಳ ಪರಮಾತ್ಮನೋ, ಸಃ=ಅವನು, ಅಹಮಸ್ಮಿ = ನನ್ನ ಅಂತರ್ಯಾಮಿಯಾಗಿ ಇದ್ದಾನೆ ಅಥವಾ ಅಹಮಸ್ಮಿ=ಅಹೇಯನಾದ್ದರಿಂದ ಅಹಂಶಬ್ದವಾಚ್ಯನಾಗಿದ್ದಾನೆ ಯಾವಾಗಲೂ ಇದ್ದಾನೆಂದು ತಿಳಿಯಲಿಕ್ಕೆ ಯೋಗ್ಯನಾದ್ದರಿಂದ ಅಸ್ಮಿ ಶಬ್ದವಾಚ್ಯನಾಗಿದ್ದಾನೆ.

ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಂ ॥ ೧೮ ॥

ಯದ್ಯಪಿ = ವಾಸ್ತವಿಕವಾಗಿ, ಇದಂ ಶರೀರಂ = ಈ ಶರೀರವು, ಭಸ್ಮಾಂತಂ= ಭಸ್ಮವೇ ಅಂತ್ಯವಾಗಿಉಳ್ಳದ್ದು, ತಥಾಪಿ = ಆದರೂ ತದಂತರ್ಗ

ತಸ್ಯ = ಆ ಶರೀರದ ಒಳಗೆ ಇರತಕ್ಕ, ಹರೇಃ = ಪರಮಾತ್ಮನಿಗೆ ನ ಮರಣಾದಿ ದೋಷಪ್ರಸಕ್ತಿಃ = ಮರಣಾದಿಗಳು ಸಂಭವಿಸುವದಿಲ್ಲ. ಅನಿಲಂ = ಅಕಾರ ವಾಚ್ಯನಾದ ಬ್ರಹ್ಮನೇ ಆಶ್ರಯವಾಗಿಉಳ್ಳ, ವಾಯುಃ = ವಾಯು ದೇವರು ಕೂಡಾ, ಅಮೃತಂ = ನಿತ್ಯರಾಗಿದ್ದಾರೆ, ಅಥ = ಹೀಗಿರುವಾಗ ಪರಮೇಶ್ವರಃ = ಪರಮಾತ್ಮನು, ಅಮೃತ ಇತಿ = ನಿತ್ಯನೆಂದು, ಕಿಮು ವಕ್ತವ್ಯಂ = ಏನು ಹೇಳತಕ್ಕದ್ದು

೧೮. ಮುಖ್ಯ ವಾಯುದೇವರು ನಿತ್ಯಜ್ಞಾನವುಳ್ಳವರಾಗಿದ್ದರಿಂದ ನಿತ್ಯ ರೆಂದು "ಏತೇನ ಮಾತರಿಶ್ವಾ ವ್ಯಾಖ್ಯಾತಃ" ಎಂಬ ಬ್ರಹ್ಮಸೂತ್ರದಲ್ಲಿ ನಿರ್ಣಯ ಮಾಡಲ್ಪಟ್ಟಿದೆ

ಓಂ ಕ್ರತೋ ಸ್ಮರ ಕೃತಗ್ಂ ಸ್ಮರ।
ಓಂ ಕ್ರತೋ ಸ್ಮರ ಕೃತಗ್ಂ ಸ್ಮರ ॥ ೧೯ ॥

ಓಂ=ಜಗದಾಧಾರನಾದ್ದರಿಂದ ಓಂ ಎಂದು ಹೇಳಿಸಿಕೊಳ್ಳಲ್ಪಟ್ಟ, ಕ್ರತೋ=ಜ್ಞಾನರೂಪನಾದ ಹರಿಯೇ, ಮಾಂ=ನನ್ನನ್ನು, ಸ್ಮರ=ಅನುಗ್ರಹಿಸು, ಕೃತಗ್ಂ=ನಾನು ಮಾಡಿದ ಧ್ಯಾನಾದಿಗಳನ್ನು ಸ್ಮರಿಸು, ನನಗೆ ಅನುಗ್ರಹ ಮಾಡತಕ್ಕವನಾಗು

೧೯. ತಾತ್ಪರ್ಯವನ್ನು ತಿಳಿಸುವದಕ್ಕೋಸ್ಕರ ಒಂದೇ ಮಂತ್ರವನ್ನು ಎರಡು ಸಲ ಹೇಳಿದ್ದು

ಸಾಕ್ಷಾತ್ಕಾರವನ್ನು ಹೊಂದಿದವನು ಮೋಕ್ಷದಲ್ಲಿ ಆನಂದದ ಅತಿಶಯ ಕ್ಕೋಸ್ಕರ ಪರಮಾತ್ಮನ ಉಪಾಸನೆಯನ್ನು ಮಾಡಬೇಕು, ಎಂಬ ಅಭಿಪ್ರಾಯ ದಿಂದ ಅಗ್ನಿಯ ಅಂತರ್ಗತನಾದ ಪರಮಾತ್ಮನ ಪ್ರಾರ್ಥನೆಯ ಪ್ರಕಾರವನ್ನು ಸಾಕ್ಷಾತ್ಕಾರವಾದ ಪುರುಷನಿಗಾಗಿ ಈ ಮಂತ್ರದಿಂದ ಹೇಳುತ್ತಾರೆ

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್
ವಿಶ್ವಾನಿ ದೇವ ವಯುನಾನಿ ವಿದ್ವಾನ್।
ಯುಯೋಧ್ಯಸ್ಮಜ್ಜುಹುರಾಣಮೇನೋ
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥ ೨೦ ॥

ಅಗ್ನೇ=ಅಪ್ರಧಾನವಾದ ಜಗತ್ತಿಗೆ ನಿಯಾಮಕನಾಗಿದ್ದರಿಂದ ಅಗ್ನಿ ಶಬ್ದ ಮುಖ್ಯಾರ್ಥನಾಗಿ ಅಗ್ನಿಯಲ್ಲಿರತಕ್ಕ ಶ್ರೀ ಹರಿಯೇ, ಅಸ್ಮಾನ್=ನಮ್ಮನ್ನು ಸುಪಥಾ-ಪುನರಾವೃತ್ತಿರಹಿತವಾದ ಅರ್ಚಿರಾದಿ ಮಾರ್ಗದಿಂದ, ರಾಯೇ=ಮೋಕ್ಷ ಕ್ಕೋಸ್ಕರ, ನಯ=ಕರಕೊಂಡು ಹೋಗು, ಹೇ ದೇವ=ಎಲೊ ಪರಮಾತ್ಮನೆ ವಿಶ್ವಾನಿ=ನಾವು ಸಂಪಾದಿಸಿದ ಸಮಸ್ತವಾದ, ವಯುನಾನಿ=ಜ್ಞಾನಗಳನ್ನು ಭವಾನ್=ನೀನು, ವೇದ=ತಿಳಿದಿದ್ದಿ, ಅಸ್ಮಾನ್=ನಮ್ಮನ್ನು, ಜುಹುರಾಣಂ=ಅಲ್ಪ ರನ್ನಾಗಿ ಮಾಡುವ, ಏನಃ=ಪ್ರಾರಬ್ಧಪಾಪವನ್ನು ಅಸ್ಮತ್=ನಮ್ಮದೆಸೆಯಿಂದ, ಯುಯೋಧಿ=ಬಿಡಿಸು, ವಯಂ=ನಾವು, ತೇ=ನಿನಗೆ, ಭೂಯಿಷ್ಠಾಂ=ಭಕ್ತಿ ಜ್ಞಾನಗಳಿಂದ ಕೂಡಿದ, ನಮಃ ಉಕ್ತಿಂ=ನಮಸ್ಕಾರ ಎಂಬ ಶಬ್ದೋಚ್ಚಾರವನ್ನು ವಿಧೇಮ=ಮಾಡುವೆವು

೨೦. ನೀನು ಮಾಡುವ ಅನುಗ್ರಹಕ್ಕೆ ನಿನಗೆ ನಮಸ್ಕಾರ ಹೊರತು ಮತ್ತೆ ಬೇರೆ ಪ್ರತ್ಯುಪಕಾರವನ್ನು ನಾವು ಮಾಡಲು ಅಸಮರ್ಥರಾಗಿದ್ದೇವೆ.

ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

॥ ಶ್ರೀ ಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು ॥

# ಹಿನ್ನುಡಿ

ಈಶಾವಾಸ್ಯೋಪನಿಷತ್ತಿನಲ್ಲಿ ಬರುವ ವಿದ್ಯಾ-ಅವಿದ್ಯಾ ಶಬ್ದಗಳ ಬಗ್ಗೆ ವಿವಿಧ ಮತಗಳಲ್ಲಿ ಬಹಳೇ ಭಿನ್ನಾಭಿಪ್ರಾಯಗಳು ತೋರಿ ಬಂದಿವೆ ತೀರ ಈಚಿಗಿನ ತತ್ತ್ವವಾದಿಗಳಲ್ಲಿ ಪ್ರಮುಖರಾದ ಶ್ರೀ ಅರವಿಂದರ ಮುಖ್ಯ ಹೃದಯವು ಈ ಕೆಳಗಿನ ಭಾಗದಿಂದ ತಿಳಿಯುವದರಿಂದ ಅದನ್ನಷ್ಟೇ ವಿಮರ್ಶಿಸುವೆವು.

## VIDYA AND AVIDYA

All manifestation proceeds by the two terms, Vidya and Avidya, the consciousness of Unity and the consciousness of Multiplicity. They are the two aspects of the Maya, the formative self-conception of the Eternal

Unity is the eternal and fundamental fact, without which all multiplicity would be unreal and an impossible illusion The consciousness of Unity is therefore called Vidya, the Knowledge.

Multiplicity is the play or varied self-expansion of the One, shifting in its terms, divisible in its view of itself, by force of which the One occupies many centres of consciousness, inhabits many formations of energy in the universal Movement Multiplicity is implicit or explicit in unity. Without it the Unity would be either a void of non existence or a powerless, sterile limitation to the state of indiscriminate self-absorption or of blank repose

But the consciousness of multiplicity separated from the true knowledge in the many of their own essential oneness,— the viewpoint of the separate ego identfying itself with the divided form and the limited action,— is a state of error and delusion In man this is the form taken

by the consciousness of multiplicity. Therefore it is given the name of Avidya, the Ignorance

Brahman, the Lord, is one and all blissful, but free from limitation by His unity; all powerfull, He is able to conceive Himself from multiple centres in multiple forms from which and upon which flow multiple currents of energy, seen by us as actions or play of forces When He is thus multiple, He is not bound by his multiplicity, but amid all variations dwells eternally in His own oneness.. He is Lord of Vidya and Avidya They are the two sides of his self conception (Maya), the twin powers of His energy (Chit-Shakti)

Brahman, exceeding as well as dwelling in the play of His Maya, is Ish, lord of it and free Man, dwelling in the play, is Anish, not lord, not free, Subject to Avidya But this subjection is itself a play of the Ignorance, unreal in essential fact (paramartha), real only in practical relation (vyavahara), in the working out of the actions of the divine Energy, the Chit-Shakti To get back to the essential fact of his freedom he must recover the sense of Oneness, the consciousness of Brahman, of the Lord, realise his oneness in Brahman and with the Lord. Recovering his freedom, realising his oneness with all existences as becomings of the One Being who is always himself (So'hamasmi, He am I), he is able to carry out divine action in the world, no longer subject to the Ignorance, because free in the Knowledge

The perfection of man, therefore, is the full manifestation of the Divine in the individual through the supreme accord between Vidya and Avidya Multiplicity must

become conscious of its oneness, Oneness embrace its multiplicity.

## The extreme paths

The purpose of the Lord in the world cannot be fulfilled by following Vidya alone or Avidya alone

Those who are devoted entirely to the principle of multiplicity and division and take their orientation away from oneness enter into a blind darkness of Ignorance. For this tendency is one of increasing contraction and limitation, disaggregation of the gains of knowledge, and greater and greater subjection to the mechanical necessities of Prakriti and finally to her separative and self destructive forces. To turn away from the progression towards Oneness is to turn away from existence and from light

Those who are devoted entirely to the principle of indiscriminate Unity and seek to put away from them the integrality of the Brahman, also put away from them knowledge and completeness and enter as if into a greater darkness. They enter into some special state and accept it for the whole, mistaking exclusion in consciousness for transcendence in consciousness They ignore by choice of knowledge, as the others are ignorant by compulsion of error. Knowing all to transcend all is the right path of Vidya

Although a higher state than the other, this supreme Night is termed a greater darkness, because the lower is one of chaos from which reconstitution is always possible, the higher is a conception of Void or Asat, an attachment to non-existence of Self from which it is more difficult to return to fulfilment of self.

## The gains in either path

Pursued with a less entire attachment the paths of Vidya and Avidya have each their legitimate gains for the human soul, but neither of these are the full and perfect thing undertaken by the individual in the manifestation.

By Vidya one may attain to the state of silent Brahman or Akshara Purusha regarding the universe without actively participating in it or to His self-absorbed state of Chit in Sat from which the universe proceeds and towards which it returns Both the states are conditions of serenity, plentitude, freedom from the confusions and sufferings of the world

But the highest goal of man is neither fulfilment in the movement as the separate individual nor in the silence separated from the movement, but in the Uttam Purusha, the Lord, He who went abroad and up-holds in Himself both the Kshara and the Akshara as modes of His being. The self of man, the Jivatman, is here in order to realise in the individual and for the universe that one highest Self of all The ego created by Avidya is a necessary mechanism for affirming individuality in the universal as the starting point for this supreme achievement.

By Avidya one may attain to a sort of fullness of power, joy, worldknowledge, largeness of being, which is that of the Titans or of the Gods of Indra, of Prajapati. This is gained in the path of self-enlargement by an ample acceptance of the multiplicity in all its possibilities and a constant enrichment of the individual by all the materials that the universe can pour into him But this also is not the

goal of man, for though it brings transcendence of the ordinary human limits, it does not bring the divine transcedence of the universe in the Lord of the universe One transcends confusion of Ignorance but not limitation of Knowledge,-transcends death of the body, but not limitation of being,-transcends subjection to sorrow, but not subjection to joy,— transcends the lower Prakriti but not the higher. To gain the real freedom and perfect Immortality one would have to descend again to all that had been rejected and make the right use of death, sorrow, and ignorance.

The real knowledge is that which perceives Brahman in His integrality and does not follow eagerly after one consciousness rather than another, is no more attached to Vidya than to Avidya This was the knowledge of ancient sages who were dhira, stead fast in the gaze of their thought, not drawn away from the completeness of knowedge by one light or by another and whose perception of Brahman was consequently entire and comprehensive and their teaching founded on that perception equally entire and comprehensive (Vichachakshire) It is the knowledge handed down from these ancients that is being set forth in the Upanishat.

*( From Isha Upanishad of Aurobindo Ghosh, pages 32-35*

[ ಸಾರಾಂಶವಿಷ್ಟು— ಏಕತ್ವಜ್ಞಾನವು ವಿದ್ಯೆ. ಅನೇಕತ್ವಜ್ಞಾನವು ಅವಿದ್ಯೆ– ಕೇವಲ ಏಕತ್ವಜ್ಞಾನದಿಂದ ಅಂಧಂತಮಃ ಪ್ರಾಪ್ತಿ, ಕೇವಲ ಅನೇಕತ್ವಜ್ಞಾನದಿಂದ ಆದಕ್ಕಿಂತಲೂ ಅಧಿಕ ಅಂಧಂತಮಃ ಪ್ರಾಪ್ತಿ ಅನೇಕತ್ವಜ್ಞಾನದಿಂದ ಈ ಮೃತ್ಯುವನ್ನು ದಾಟಿ ಏಕತ್ವಜ್ಞಾನದಿಂದ ಅಮೃತತ್ವವನ್ನು ಹೊಂದುತ್ತಾನೆ ಈ ಜೀವನಿಗೆ ಮೋಕ್ಷವಾಗಬೇಕಾದರೆ ವಿದ್ಯೆ ಅವಿದ್ಯೆ ಎರಡೂ ಬೇಕು. ಮೊದಲು ಒಬ್ಬನೇ ಬ್ರಹ್ಮನು ಇದ್ದನು. ಅವನು ಅನೇಕ ಜೀವರ ಸ್ವರೂಪವನ್ನು ಹೊಂದಿದನು. ಆದುದರಿಂದ

**ಬ್ರಹ್ಮನಲ್ಲಿ ಏಕತ್ವ ಮತ್ತು ಅನೇಕತ್ವ ಎರಡೂ ಇವೆ ಇವುಗಳ ಪೈಕಿ ಒಂದನ್ನು ಮಾತ್ರ ತಿಳಿದರೆ ಒಂದು ವಸ್ತುವಿನ ಒಂದು ಭಾಗವನ್ನು ಮಾತ್ರ ತಿಳಿದಂತೆ ಆಗುತ್ತದೆ. ಬ್ರಹ್ಮನನ್ನು ಪೂರ್ಣವಾಗಿ ತಿಳಿದಂತೆ ಆಗುವದಿಲ್ಲ ಅನೇಕತ್ವಕ್ಕೆ ಏಕತ್ವವು ಮೂಲವಾದ್ದರಿಂದ ಏಕತ್ವಜ್ಞಾನವು ವಿದ್ಯೆ, ಅನೇಕತ್ವಜ್ಞಾನವು ಅವಿದ್ಯೆ ಬ್ರಹ್ಮನು ಅನೇಕತ್ವವನ್ನು ಹೊಂದಿದ್ದು ಅವನ ಕ್ರೀಡೆಯಿಂದ; ಅವನು ಸರ್ವಜ್ಞತ್ವ ಸರ್ವ ಶಕ್ತಿ ಪೂರ್ಣಾನಂದಾದಿಗಳಿಂದ ಕೂಡಿದವನು ಅವನು ಈಶನು ಈ ಜೀವನು ಅನೀಶನು. ಬ್ರಹ್ಮನಿಗೆ ದುಃಖಾದಿ ಬಂಧನವಿಲ್ಲ ಜೀವನಿಗೆ ಇರುತ್ತದೆ ]**

ಇಲ್ಲಿ ಜೀವನಿಗೆ ದುಃಖಾದ್ಯನರ್ಥ ಇದೆ ಬ್ರಹ್ಮನಿಗೆ ಇಲ್ಲ ಬ್ರಹ್ಮನೇ ಜೀವನು ಎಂಬುದು "ನನ್ನ ತಾಯಿಯು ಬಂಜೆಯು" ಎಂಬಂತೆ ಪರಸ್ಪರ ವಿರುದ್ಧವಾಗುವದು ಜೀವನಿಗೆ ದುಃಖಾದಿಗಳು ಪಾರಮಾರ್ಥಿಕವಲ್ಲವೆಂದರೆ ದುಃಖಾದ್ಯನುಭವವು ಭ್ರಾಂತಿ ಎಂದಾಯಿತು ಆ ಭ್ರಾಂತಿಯು ಜೀವನಿಗೆ ಇದೆ, ಜೀವಾಭಿನ್ನವಾದ ಬ್ರಹ್ಮನಿಗೆ ಇಲ್ಲವೆಂದರೆ ಪುನಃ ಪರಸ್ಪರ ವಿರೋಧವು ಉಂಟಾಯಿತು

'ಅನೇಕತ್ವಕ್ಕೆ ಏಕತ್ವವು ಮೂಲವಾದ್ದರಿಂದ ಏಕತ್ವ ಜ್ಞಾನವು ವಿದ್ಯೆ, ಅನೇಕತ್ವ ಜ್ಞಾನವು ಅವಿದ್ಯೆ' ಎಂದು ಹೇಳಿದ್ದು ಸರಿಯಲ್ಲ ಸ್ವಾಭಾವಿಕವಾಗಿ ಏಕತ್ವವುಳ್ಳದ್ದರಲ್ಲಿ ಮಾಯಾದ್ಯುಪಾಧಿಯಿಂದ ಅನೇಕತ್ವವು ಪ್ರಾಪ್ತವಾಯಿತೆಂದು ಹೇಳಬೇಕಾದರೆ ಆ ಉಪಾಧಿಯ ಸಂಬಂಧವು ಸಂಪೂರ್ಣ ಬ್ರಹ್ಮನಿಗೆ ಆಯಿತೇ? ಬ್ರಹ್ಮನ ಒಂದು ಭಾಗಕ್ಕೆ ಆಯಿತೇ? ಎಂಬದನ್ನು ಮೊದಲು ನಿರ್ಣಯ ಮಾಡಬೇಕಾಗುತ್ತದೆ. ಸಂಪೂರ್ಣ ಬ್ರಹ್ಮನಿಗೆ ಉಪಾಧಿ ಸಂಬಂಧವಾದರೆ ಅನೇಕತ್ವವು ಉಪಾಧಿಯಿಂದ ಪ್ರಾಪ್ತವಾಗಲಾರದು ಒಂದು ಹಾಲಿನಲ್ಲಿ ಅನೇಕ ಕೋಣೆಗಳನ್ನು ಮಾಡಬೇಕಾದರೆ ಅಲ್ಲಲ್ಲಿ ಅನೇಕ ಗೋಡೆಗಳನ್ನು ಹಾಕಬೇಕು ಹೊರ್ತು ಅಲ್ಲಿ ಮಣ್ಣಿನ ರಾಶಿಯನ್ನು ತುಂಬಿದರೆ ಅನೇಕ ಕೋಣೆಗಳು ಆಗಲಾರವು

ಅದರಂತೆ ಸಂಪೂರ್ಣ ಬ್ರಹ್ಮನಿಗೆ ಉಪಾಧಿಸಂಬಂಧವಾದರೆ ಬ್ರಹ್ಮನಲ್ಲಿ ಅನೇಕತ್ವ ಬರಲಾರದು ಬ್ರಹ್ಮನ ಒಂದು ಭಾಗಕ್ಕೆ ಉಪಾಧಿ ಸಂಬಂಧವಾಯಿತೆಂದರೆ ಉಪಾಧಿ ಸಂಬಂಧಕ್ಕಿಂತ ಮೊದಲೇ ಬ್ರಹ್ಮನಲ್ಲಿ ಅನೇಕ ಭಾಗಗಳಿದ್ದುವೆಂದಾಯಿತು ಬ್ರಹ್ಮನಲ್ಲಿ ಏಕತ್ವದಂತೆ ಅನೇಕತ್ವವೂ ಸ್ವಾಭಾವಿಕವೆಂದೇ

ಹೇಳಬೇಕಾಯಿತು ಏಕತ್ವಾನೇಕತ್ವಗಳೆರಡೂ ಸ್ವಾಭಾವಿಕವಾಗಿದ್ದು ಮೂಲ ಮೂಲೀ ಭಾವರಹಿತವಾದರೆ ಒಂದರ ಜ್ಞಾನವು ವಿದ್ಯೆ, ಇನ್ನೊಂದರ ಜ್ಞಾನ ಅವಿದ್ಯೆ ಎಂಬೆನ್ನಲು ಕಾರಣವೇನು ?

'ವಿದ್ಯಾತ್ಮನಿ ಭಿದಾ ಬೋಧಃ' ಎಂದು ಅನೇಕತ್ವಜ್ಞಾನವು ವಿದ್ಯೆ ಎಂದು ಭಾಗವತದ ಹನ್ನೊಂದನೇ ಸ್ಕಂಧದಲ್ಲಿ ಕಂಡುಬರುತ್ತದೆ ಅದಕ್ಕೂ ಈ ವ್ಯಾಖ್ಯಾನವು ವಿರುದ್ಧ

ಕೇವಲೈಕತ್ವ ಜ್ಞಾನಿಗಳೂ ಕೇವಲಾನೇಕತ್ವ ಜ್ಞಾನಿಗಳೂ ಅಂಧಂ ತಮಸ್ಸಿಗೆ ಹೋದರೆ ಅಲ್ಲಿ ಇಷ್ಟೇ ಕಾಲವಿರುತ್ತಾರೆಂದು ನಿರ್ಣಯವಿದೆಯೋ ? ಇಂಥಾ ಪಾಪಕರ್ಮಕ್ಕೆ ಇಷ್ಟು ಕಾಲ ನರಕವೆಂದು ಶಾಸ್ತ್ರದಲ್ಲಿ ಸ್ಪಷ್ಟವಾದ ಉಕ್ತಿ ಇರುವಂತೆ ಈ ವಿಷಯದಲ್ಲಿ ಉಕ್ತಿ ಇಲ್ಲ ಅಂಧಂತಮಸ್ಸಿಗೆ ಗುರುಗಳು ಹೋಗಿ ಅಲ್ಲಿರುವವರಿಗೆ ಸರಿಯಾದ ಜ್ಞಾನವನ್ನುಪದೇಶಿಸಿ ಅಲ್ಲಿಂದ ಬಿಡುಗಡೆ ಮಾಡ ಬೇಕಾದೀತು ಅದಕ್ಕಾಗಿ ಜ್ಞಾನಿಗಳಾದ ಗುರುಗಳಿಗೂ ಅಂಧಂತಮಃಪ್ರಾಪ್ತಿ ಯಾಗಬೇಕಾದೀತು ಅಂಧಂತಮಸ್ಸನ್ನು ಹೊಂದಿದವರು ಬಿಡುಗಡೆಯನ್ನೇ ಹೊಂದುವದಿಲ್ಲವೆಂದರೆ ಬ್ರಹ್ಮಸ್ವರೂಪರಾದ ಜೀವರಿಗೆ ನಿತ್ಯ ನರಕಪ್ರಾಪ್ತಿಯನ್ನು ಹೇಳಬೇಕಾದೀತು.

ಅನೇಕತ್ವ ಜ್ಞಾನದಿಂದ ಮೃತ್ಯುತರಣವೆಂದೂ ಏಕತ್ವ ಜ್ಞಾನದಿಂದ ಅಮೃತತ್ವ ಪ್ರಾಪ್ತಿ ಎಂದೂ ವಿಭಾಗಿಸಲು ಕಾರಣವೇನು ? ಏಕತ್ವ ಜ್ಞಾನದಿಂದ ಮೃತ್ಯುತರಣ, ಅನೇಕತ್ವ ಜ್ಞಾನದಿಂದ ಅಮೃತತ್ವಪ್ರಾಪ್ತಿ ಎಂದು ಏಕೆ ಭಾವಿಸ ಬಾರದು ? ಈ ವ್ಯತ್ಯಾಸಕ್ಕೆ ಸರಿಯಾದ ಕಾರಣ ಪ್ರಮಾಣಗಳು ಇಲ್ಲವಾದ ಕಾರಣ ಈ ವ್ಯಾಖ್ಯಾನವು ಬಹು ಅನಾದರಣೀಯವಾಗಿವೆ.

ಶ್ರೀ ಮಧ್ವಾಚಾರ್ಯರು ತಮ್ಮ ವ್ಯಾಖ್ಯಾನವನ್ನು ಕಾರಣ, ಪ್ರಮಾಣ, ಉದಾಹರಣೆಗಳಿಂದ ದೃಢವಾಗಿ ಸಮರ್ಥಿಸಿದ್ದಾರೆ ಆದಕಾರಣ ಅಪ್ರಾಮಾಣಿಕ ಹಾಗೂ ನಿಷ್ಕಾರಣವಾದ ವ್ಯಾಖ್ಯಾನದಿಂದ ಸಜ್ಜನರು ಮೋಸಹೋಗಬಾರದು.

॥ ಇತಿ ಶಂ ॥

**ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳು**